# ಭಾಗ್ಯಲಕ್ಷ್ಮಿ

## ವನಿತೆಯರ ಪಾಲಿಗೆ ವರದಾನ

ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನಕ್ಕೆ ಹೆಚ್ಚಿನ ಮನ್ನಣೆ ದೊರಕಿಸಿಕೊಡುವ ಉದ್ದೇಶದಿಂದ ಕರ್ನಾಟಕ ಸರ್ಕಾರವು ಕೈಗೊಂಡಿರುವ ಮಹತ್ವದ ಯೋಜನೆ–ಭಾಗ್ಯಲಕ್ಷ್ಮಿ. ಬಡತನದ ರೇಖೆಗಿಂತ ಕೆಳಗಿರುವ ಕುಟುಂಬಗಳಲ್ಲಿ 31ನೇ ಮಾರ್ಚ್ 2006ರ ನಂತರ ಜನಿಸಿದ ಇಬ್ಬರು ಹೆಣ್ಣುಮಕ್ಕಳಿಗೆ, ಅವರು 18 ವರ್ಷ ವಯಸ್ಸು ತಲುಪಿದಾಗ ರೂ. ಒಂದು ಲಕ್ಷ ಮೊತ್ತವನ್ನು ನೀಡುವುದು ಈ ಯೋಜನೆಯ ಸಾರಾಂಶ.

## ಯೋಜನೆಯ ಮುಖ್ಯಾಂಶಗಳು

- 2006–07ನೇ ಸಾಲಿನಲ್ಲಿ ನೋಂದಾಯಿತರಾದ ಫಲಾನುಭವಿಗಳಿಗೆ ರೂ. 10,850/– ಠೇವಣಿ.
- 2007–08ನೇ ಸಾಲಿನಲ್ಲಿ ನೋಂದಾಯಿತರಾದ ಫಲಾನುಭವಿಗಳಿಗೆ ರೂ. 20,000/– ಠೇವಣಿ. 2008–09ನೇ ಸಾಲಿಗೆ ಇದನ್ನು ಇಮ್ಮಡಿಗೊಳಿಸಲಾಗಿದೆ.
- 31ನೇ ಮಾರ್ಚ್ 2006 ನಂತರ ಬಿಪಿಎಲ್ ಕುಟುಂಬದಲ್ಲಿ ಜನಿಸಿದ ಇಬ್ಬರು ಹೆಣ್ಣುಮಕ್ಕಳು ಈ ಯೋಜನೆಗೆ ಅರ್ಹರು. ಆ ಕುಟುಂಬ 3ಕ್ಕಿಂತ ಹೆಚ್ಚುಮಕ್ಕಳನ್ನು ಹೊಂದಿರಬಾರದು.
- ಒಂದನೇ ತರಗತಿಯಿಂದ ಹತ್ತನೆಯ ತರಗತಿಯವರೆಗೆ ರೂ. 300/– ರಿಂದ ರೂ. 1,000/– ವರೆಗಿನ ವಾರ್ಷಿಕ ವಿದ್ಯಾರ್ಥಿ ವೇತನ.
- 18 ವರ್ಷ ವಯಸ್ಸಿನವರೆಗೆ ರೂ. 25,000/– ರಷ್ಟು ಆರೋಗ್ಯ ವಿಮೆ.
- ದುಡಿಯುತ್ತಿರುವ ತಂದೆ, ತಾಯಿ ಅಥವಾ ಪೋಷಕರ ಸಾವು ಸಂಭವಿಸಿದಲ್ಲಿ ರೂ. ಒಂದು ಲಕ್ಷದವರೆಗೆ ಕುಟುಂಬ ವಿಮೆ.

**ಸ್ತ್ರೀ ಸಬಲೀಕರಣಕ್ಕೆ ವಿನೂತನ ಕ್ರಮ**


ಕರ್ನಾಟಕ ವಾರ್ತೆ

# ನಮ್ಮ ಮಾನಸ

**ಸೆಪ್ಟೆಂಬರ್ 2011**
ಸಂಪುಟ : 5 ಸಂಚಿಕೆ : 5

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*✆ : 26757159*





*ಚಂದಾ ವಿವರ*

| | |
|---|---|
| **ಬಿಡಿಪ್ರತಿ** | **8–00 ರೂ.** |
| **ವಾರ್ಷಿಕ ಚಂದಾ** (ವಿಶೇಷ ಸಂಚಿಕೆಯೊಂದಿಗೆ) | **100–00 ರೂ.** |
| **ಸಂಸ್ಥೆಗಳಿಗೆ** | **150–00 ರೂ.** |

## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

***ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ***

**ವೆಂ. ವನಜ**

*2329, 12ನೇ ಮೈನ್, 2ನೇ ಹಂತ,*
*ವಿಜಯನಗರ, ಮೈಸೂರು – 570 017*

**ಪ್ರಾರಂಭ : 'ಮಾನುಷಿ' (1985ರಲ್ಲಿ),**
**ಅನಂತರ 'ಮಾನಸ',**
**ಈಗ 'ನಮ್ಮ ಮಾನಸ'**




ಸಂಪಾದಕೀಯ

# ಮಹಿಳಾ ಚಳವಳಿಗಳ ಮೇಲಿನ ಒತ್ತಡಗಳು; ಕಾರ್ಯತಂತ್ರ ರೂಪಿಸುವಲ್ಲಿನ ವೈಫಲ್ಯ

ಜಾಗತೀಕರಣದ ಇಂದಿನ ಸಂದರ್ಭದಲ್ಲಿ ಸ್ವಾಯತ್ತ ಮಹಿಳಾ ಚಳವಳಿ ಹಾಗೂ ದಲಿತ ಮಹಿಳಾ ಪ್ರಶ್ನೆಗಳ ಬಗ್ಗೆ ಚರ್ಚಿಸುವುದು ಮುಖ್ಯವಾಗುತ್ತದೆ. ಮುಕ್ತ ಮಾರುಕಟ್ಟೆಯ ಮಾಯಾ ಬಜಾರ್‌ನಲ್ಲಿ ಒಂದು ವರ್ಗ, ಜಾತಿಯ ಮಹಿಳೆಯರು 'ಪ್ರತಿಭೆ' 'ಸಾಮರ್ಥ್ಯ'ಗಳ ಮೂಲಕ ಉದ್ಯೋಗದ ಅವಕಾಶಗಳ ಮೆಟ್ಟಿಲು ಏರುತ್ತಾ ಇದ್ದರೆ, ಅದೇ ಮಾಯಾಬಜಾರ್‌ನಲ್ಲಿ ಅಷ್ಟೇ ತ್ವರಿತ ಗತಿಯಲ್ಲಿ ಮೂಲೆ ಗುಂಪಾಗುತ್ತಿರುವ ಅನೇಕ ಜಾತಿ, ವರ್ಗದ ಶ್ರಮಿಕ ಮಹಿಳೆಯರಿದ್ದಾರೆ. ಅವರು ದುಪ್ಪಟ್ಟು ಸಂಖ್ಯೆಯಲ್ಲಿದ್ದಾರೆ, ಜೀವನಾಧಾರಗಳನ್ನು ಕಳೆದುಕೊಳ್ಳುತ್ತಿದ್ದಾರೆ. ಬದುಕು ಅಸಹನೀಯವಾಗುತ್ತಿದೆ, ದುಡಿಮೆಯ ಸ್ಥಿತಿ–ಗತಿಗಳು ಶೋಚನೀಯವಾಗಿವೆ. ನಮ್ಮ ಸುತ್ತ–ಮುತ್ತ 3000ರೂಗೆ ಹೊಡೆದಾಡುತ್ತಾ ಬದುಕುವ ಗಾರ್ಮೆಂಟ್ಸ್ ಮಹಿಳೆಯರಿದ್ದಾರೆ; 2000ರೂಗಾಗಿ ಉಪವಾಸ ಕೂರುವ ಅಂಗನವಾಡಿ ಕಾರ್ಯಕರ್ತೆಯರಿದ್ದಾರೆ; ಕೂಲಿ ಕಾರ್ಮಿಕ ಕೃಷಿ ಮಹಿಳೆಯರು ನಗರಕ್ಕೆ ವಲಸೆ ಬರುತ್ತಿದ್ದಾರೆ; ಆತ್ಮಹತ್ಯೆಯ ಹಿನ್ನೆಲೆಯಲ್ಲಿ ಹಲವಾರು ರೈತ ಮಹಿಳೆಯರು ಕಂಗಾಲಾಗಿದ್ದಾರೆ; ಅರಣ್ಯಗಳು, ನೀರಿನ ಸಂಪನ್ಮೂಲಗಳು ನಾಶವಾಗುತ್ತಿರುವ ಹಿನ್ನೆಲೆಯಲ್ಲಿ ಸ್ಥಳಾಂತರಗೊಳ್ಳುತ್ತಿರುವ ಆದಿವಾಸಿಗಳಿದ್ದಾರೆ; ಕನಿಷ್ಠ ಕೂಲಿಗಾಗಿ ಹೋರಾಟ ನಡೆಸುತ್ತಿರುವ ಬೀದಿಕಸ ಗುಡಿಸುವ ದಲಿತ ಮಹಿಳೆಯರಿದ್ದಾರೆ; ಅನೇಕ ಹರಸಾಹಸಗಳ ನಡುವೆ ದುಡಿಯುವ ಲೈಂಗಿಕ ಕಾರ್ಯಕರ್ತೆಯರಿದ್ದಾರೆ; ವಿಭಿನ್ನ ಲಿಂಗಿಗಳು ಇದ್ದಾರೆ. ಈ ಎಲ್ಲವನ್ನೂ ತಾತ್ವಿಕ ಹಾಗೂ ಹೋರಾಟದ ನೆಲೆಯಲ್ಲಿ ಒಳಗೊಳ್ಳುವ ಹಾಗೂ ಒಂದು ಇನ್‌ಕ್ಲುಸೀವ್ ವಿಷನ್‌ನ ಹೋರಾಟದ ಅಗತ್ಯವನ್ನು ಸ್ವಾಯತ್ತ ಮಹಿಳಾಚಳವಳಿ ಹೇಳುತ್ತಾ ಬಂದಿದೆ. ಆದರೆ ಇಂದಿನ ವಿಷಮ ಪರಿಸ್ಥಿತಿಯಲ್ಲೂ ಇಂತಹ ಹೋರಾಟದ ನೆಲೆಗಳನ್ನು ಕಂಡುಕೊಳ್ಳಲು ಸಾಧ್ಯವಾಗದಿರುವ ಅಂಶಗಳ ಬಗ್ಗೆ ಯೋಚಿಸುತ್ತಲೇ ದಲಿತ ಮಹಿಳಾ ಪ್ರಶ್ನೆಗಳನ್ನು ಸ್ವಾಯತ್ತ ಮಹಿಳಾ ಚಳವಳಿ ನಿರ್ವಹಿಸಿದ ಬಗೆಯನ್ನು ಚರ್ಚಿಸಬೇಕಾಗುತ್ತದೆ.

ರಾಚನಿಕ ಹಿಂಸೆಯನ್ನು ವೈಯಕ್ತಿಕ ನೆಲೆಯಿಂದ ಸಾರ್ವಜನಿಕ ನೆಲೆಗೆ ತರುವ ಪ್ರಾರಂಭಿಕ ಹಂತದ ಹೋರಾಟದಲ್ಲಿ ವರ್ಗ, ಜಾತಿ, ಧರ್ಮಗಳನ್ನು ಮೀರಿ ಎಲ್ಲೆಲ್ಲೂ ವ್ಯವಸ್ಥಿತವಾಗಿದ್ದ ಹಿಂಸೆಯನ್ನು ಕಾನೂನುಗಳ ಮೂಲಕ, ಕಾನೂನು ಸುಧಾರಣೆಗಳ ಬೇಡಿಕೆಗಳ ಮೂಲಕ, ಕೌನ್ಸಿಲಿಂಗ್ ಮೂಲಕ, ಸಹೋದರಿತ್ವದ ಮೂಲಕ ಎಲ್ಲಾ ಮಹಿಳೆಯರನ್ನೂ ಒಳಗೊಳ್ಳಲು ಶ್ರಮಿಸಿದ ಮಹಿಳಾ ಚಳವಳಿಯು ಈಗ ಶ್ರಮಿಕ ಮಹಿಳೆಯರ ಸಾರ್ವಜನಿಕ ವಲಯದ ರಾಚನಿಕ ಹಿಂಸೆಯನ್ನು ಹಾಗೂ ವೈಯಕ್ತಿಕ ಹಿಂಸೆಯ ಸ್ವರೂಪವನ್ನು ವಿಭಿನ್ನವಾಗಿಯೇ ನಿರ್ವಹಿಸಬೇಕಾದ ಒತ್ತಡಕ್ಕೆ ಸಿಲುಕಿದೆ. ಜಾಗತೀಕರಣದ ಆರ್ಥಿಕ ಹುನ್ನಾರಗಳು, ಮಾರುಕಟ್ಟೆಯ ಒಳಸುಳಿಗಳು ರೂಪಿಸುತ್ತಿರುವ ಬಂಡವಾಳ ಪಿತೃಪ್ರಧಾನತೆಯು ಮನೆ ಒಳ ಹೊರಗುಗಳಲ್ಲಿ ಶ್ರಮಿಕ ಮಹಿಳೆಯ ಜೀವಿಸುವ ಹಕ್ಕನ್ನೇ ಕಸಿದುಕೊಳ್ಳುತ್ತಿರುವುದರಿಂದ ಈಗಲಾದರೂ ಶ್ರಮಿಕ ಮಹಿಳೆಯರ ಹೋರಾಟಗಳ ಬಗ್ಗೆ ಒಂದು ಇನಕ್ಲುಸೀವ್ ವಿಷನ್ (ಎಲ್ಲವನ್ನೂ ಒಳಗೊಳ್ಳುವ) ನಮ್ಮ ಮುಂದಿನ ಜರೂರಿಯಂತೂ ಹೌದು. ಇದರ ಅರಿವಿದ್ದೂ ಕೂಡಾ ಇದು ಸಾಧ್ಯವಾಗದಿರುವುದಕ್ಕೆ ಕಾರಣಗಳ ಬಗ್ಗೆ ನಮ್ಮನ್ನು ನಾವೇ ಪ್ರಶ್ನಿಸಿಕೊಳ್ಳಬೇಕು.

ಸ್ವಾಯತ್ತ ಮಹಿಳಾ ಚಳವಳಿಯಲ್ಲಿ ಹಲವಾರು ಮಿತಿಗಳಿವೆ. ಶಿಕ್ಷಣ, ಆಂಗ್ಲಭಾಷೆ, ಅನುಕೂಲಕರ ಹಿನ್ನೆಲೆಯಿಂದ ಬಂದ ಮಹಿಳೆಯರಿಂದ ರೂಪಿತವಾದ ಚಳವಳಿಯ ಸಾಮೂಹಿಕ ನಾಯಕತ್ವ ನಗರ ಪ್ರದೇಶಗಳಿಗೆ ಸೀಮಿತವಾಗಿರುವುದರಿಂದ ಗ್ರಾಮೀಣ ಮಹಿಳೆಯರು ಚಳವಳಿಯಿಂದ ದೂರವೇ ಉಳಿದಿದ್ದಾರೆ. ಹಳ್ಳಿಗಳಲ್ಲಿ ಜಾತಿಯ ಸಮಸ್ಯೆ ಭೂತಾಕಾರವಾಗಿದ್ದು ಅದು ಮಹಿಳೆಯರ ಪ್ರತಿನಿತ್ಯದ ಜೀವನದಲ್ಲಿ ವಹಿಸುವ ಸಂಕೀರ್ಣ ಪಾತ್ರದ ಸ್ವರೂಪವನ್ನಾಗಲೀ, ರಾಜಕೀಯ ನೆಲೆಗಳನ್ನಾಗಲೀ ಗುರುತಿಸುವಲ್ಲಿ ಮಹಿಳಾ ಚಳವಳಿ ಸೋತಿದೆ. ಗ್ರಾಮೀಣ ನೆಲೆಯಲ್ಲಿ ಮಹಿಳಾ ನಾಯಕತ್ವ ವ್ಯಾಪಕವಾಗಿ ಮೂಡದೇ ಇರುವುದರಿಂದ ಕೂಡಾ ಜಾತಿಯಾಧಾರಿತ ಸಮಸ್ಯೆಗಳ ವಿರುದ್ಧ ಕಾರ್ಯತಂತ್ರ ರೂಪಿಸುವಲ್ಲಿ ಹಾಗೂ ಹೋರಾಡುವಲ್ಲಿ ಕೂಡಾ ಮಹಿಳಾ ಚಳವಳಿ ವಿಫಲವಾಗಿದೆ.

ಚಳವಳಿಯ ಅರ್ಥದಲ್ಲಿ ವ್ಯಾಪಕವಾಗಿ ಮಹಿಳಾ ಹೋರಾಟ ನಡೆಸಲು ಸಂಘಟನೆಗಳಿಗೆ ಹಲವಾರು ಮಿತಿಗಳು ಕೂಡಾ ಇವೆ. ಸ್ವಾಯತ್ತ ಸಂಘಟನೆಗಳ ಸಂಖ್ಯೆಯೇ ಕಡಿಮೆ. ಜೊತೆಗೆ ಚಳವಳಿಗೆ ಬೇಕಾದ ಬದ್ಧತೆ ಇರುವ ಕಾರ್ಯಕರ್ತೆಯರು ಇರುವುದು ಬೆರಳೆಣಿಕೆಯಷ್ಟು. ಜೀವನಾಧಾರಕ್ಕೆ ಹಲವಾರು ರೀತಿಯ ಉದ್ಯೋಗಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು, ಸಾಂಸ್ಥಿಕ ಸ್ವರೂಪ ಹೊಂದಿರದ ಸಂಘಟನೆಗಳಲ್ಲಿ ಇರುವ ಕಾರ್ಯಕರ್ತೆಯರು ಸಮಯ, ಸೌಲಭ್ಯಗಳ ಸಮಸ್ಯೆ ಎದುರಿಸುತ್ತಾರೆ. ಆದರೆ ಇವು ನೆಪಗಳಾಗಬಾರದು. ಬಹಳಷ್ಟು ಕಾರ್ಯಕರ್ತೆಯರು ಇಂದು ವಿದೇಶೀ ನೆರವಿರುವ ಹಾಗೂ ಸಾಂಸ್ಥಿಕ ಸ್ವರೂಪವಿರುವ ಮಹಿಳಾ ಸಂಘಟನೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಇಂತಹವುಗಳಿಂದ ಮಾಸ್ ಬೇಸ್ ಚಳವಳಿ ನಿರೀಕ್ಷಿಸುವುದು ಸಾಧ್ಯವಿಲ್ಲ. ಫಂಡಿಂಗ್ ರಾಜಕೀಯ ಬದಲಾದಾಗಲೆಲ್ಲ ಇವರ ಹೋರಾಟದ ಆದ್ಯತೆಗಳು ಬದಲಾಗುತ್ತವೆ. ಮಹಿಳಾ ಸಂಘಟನೆಯೊಳಗೆ ಇರುವ ಕಾರ್ಯಕರ್ತೆಯರ/ ನಾಯಕತ್ವದ ವ್ಯಕ್ತಿಗತ ಹೋರಾಟದ ಆದ್ಯತೆಗಳಿಂದಾಗಿ ಕೂಡಾ ಸಂಘಟನೆಯನ್ನು ಸಾಮೂಹಿಕ ನೆಲೆಯಲ್ಲಿ ಕೊಂಡು ಹೋಗಲು ಸಾಧ್ಯವಾಗದಿರುವುದೂ ಇದೆ.

ಈ ಎಲ್ಲಾ ಮಿತಿಗಳ ನಡುವೆಯೂ ಮಹಿಳಾಚಳವಳಿ ಕಳೆದ ಮೂವತ್ತು ವರ್ಷದಲ್ಲಿ ಸ್ಥಳಾಂತರ, ಕೋಮುವಾದ, ಪೌರಕಾರ್ಮಿಕರು, ಸಾರಾಯಿ ನಿಷೇಧ, ನರ್ಮದಾ ಹೋರಾಟ, ನಿಶ್ಶಸ್ತ್ರೀಕರಣ, ಶಾಂತಿ, ಗುಜರಾತ್‌ನಲ್ಲಿ ನಡೆದ ಹಿಂಸೆ, ಸೆಕ್ಷುಯಲ್ ಮೈನಾರಿಟೀಸ್ ರೈಟ್ಸ್, ಮಹಿಳೆಯ ಆರೋಗ್ಯ, ಚರಿತ್ರೆಯ ಮರುನಿರ್ಮಾಣ, ವರದಕ್ಷಿಣೆ, ಅತ್ಯಾಚಾರ, ಗಾರ್ಮೆಂಟ್, ಅಂಗನವಾಡಿ ವರ್ಕರ್ಸ್ – ಮುಂತಾದ ಹಲವು ಹೋರಾಟದಲ್ಲಿ ಭಾಗವಹಿಸಿ ಲಿಂಗಾಧರಿತ ಅಸಮಾನತೆಯಲ್ಲಿರುವ ಜಾತಿ, ವರ್ಗ, ಧರ್ಮದ ನೆಲೆಗಳನ್ನು ಪ್ರಶ್ನಿಸುತ್ತಲೇ ಬಂದಿದೆ. ಆಯಾ ಸಂದರ್ಭಕ್ಕೆ, ಆಯಾ ಕಾಲದ ಚಾರಿತ್ರಿಕ ಸಮಸ್ಯೆಗಳಿಗೆ ಸ್ಪಂದಿಸಿದ ಮಹಿಳಾಚಳವಳಿ ಯಾವುದೇ ಸಮಸ್ಯೆಯನ್ನು ನಿರಂತರವಾಗಿ ಹೋರಾಡಿದ್ದಾಗಲೀ, ಕಾರ್ಯಕ್ರಮ ರೂಪಿಸಿಕೊಂಡದ್ದಾಗಲೀ ಇಲ್ಲ. ಬಹುಶಃ ಮೇಲೆ ಹೇಳಿದ ಮಿತಿಗಳೂ ಇದಕ್ಕೆ ಕಾರಣವಿರಬಹುದು.

ಈ ಹಿನ್ನೆಲೆಯಲ್ಲಿ ದಲಿತ ಮಹಿಳಾ ಪ್ರಶ್ನೆಗಳನ್ನು ಸ್ವಾಯತ್ತ ಮಹಿಳಾಗುಂಪುಗಳು ನಿರ್ವಹಿಸಿದ ರೀತಿಯನ್ನು ನಾವು ಅರ್ಥಮಾಡಿಕೊಳ್ಳಬಹುದಾಗಿದೆ. ವೈದಿಕಶಾಹಿ, ಬ್ರಾಹ್ಮಣಶಾಹಿ ಪಿತೃಪ್ರಧಾನತೆ ಹುಟ್ಟುಹಾಕಿದ ಜಾತಿ ವ್ಯವಸ್ಥೆಯನ್ನು ವಿರೋಧಿಸುತ್ತಲೇ ಪ್ರಭುತ್ವದ ಪಿತೃಪ್ರಧಾನತೆಯನ್ನೂ , ಆಯಾ ಜಾತಿ ಹುಟ್ಟು ಹಾಕುವ ಪಿತೃಪ್ರಧಾನತೆಯ ವಿರುದ್ಧವೂ ಮಹಿಳಾಚಳವಳಿ ಹೋರಾಟ ನಡೆಸಿದೆ. ಕರ್ನಾಟಕದಲ್ಲಿ ಬೆತ್ತಲೆಸೇವೆ ವಿರುದ್ಧ, ಹುಣಸೇಕೋಟೆ ಅನಸೂಯಮ್ಮನ ಪ್ರಕರಣದಲ್ಲಿ, ದಲಿತ ಮಹಿಳೆಯರ ವೈಯಕ್ತಿಕ ಕೇಸುಗಳಿಗೆ, ಮಥುರಾ, ಬನ್ವಾರಿದೇವಿ ಪ್ರಕರಣಗಳಲ್ಲಿ ಪ್ರಭುತ್ವದಲ್ಲಿ ಒಂದಾಗಿರುವ ಜಾತಿ ಪಿತೃಪ್ರಧಾನತೆಗಳನ್ನು ಕೂಡಾ ಮಹಿಳಾಗುಂಪುಗಳು ವಿರೋಧಿಸಿವೆ. ದೆಹಲಿಯಲ್ಲಿ ಮಹಿಳಾ ಸಂಘಟನೆಗಳು 'ದಲಿತ ಮಹಿಳಾಚಳವಳಿ ಕೋಮುವಾದಿ ರಾಜಕೀಯಕ್ಕೆ ಸವಾಲೊಡ್ಡಬಲ್ಲದೇ' ಎಂಬ ವಿಷಯ ಕುರಿತು 2002ರ ಸುಮಾರಿನಲ್ಲಿ ನಡೆಸಿದ ಚರ್ಚೆ, ಸಂವಾದಗಳು ಕೋಮುವಾದ, ಜಾತಿ, ಪ್ರಭುತ್ವದ ಪಿತೃಪ್ರಧಾನತೆಯ ಅಂಶಗಳು ಗುಜರಾತ್ ನಲ್ಲಿ ಮುಸ್ಲಿಂ ಮಹಿಳೆಯರ ಮೇಲೆ ನಡೆದ ಹಿಂಸೆಯಲ್ಲಿ ಕೆಲಸ ಮಾಡಿದ್ದನ್ನು ಗುರುತಿಸುತ್ತವೆ. ಮೂಲಭೂತವಾದಿ ಪಿತೃಪ್ರಧಾನತೆಯ ಹುನ್ನಾರಗಳನ್ನೂ ಸಹ ಮಹಿಳಾ ಚಳವಳಿ ಬಯಲಿಗೆಳೆದಿದೆ. ಮಹಿಳಾ ಚಳವಳಿ ಪಿತೃಪ್ರಧಾನತೆಯನ್ನು ಏಕರೂಪದಿಂದ ಗ್ರಹಿಸಿಲ್ಲ. ಪ್ರತಿ ಸಮಸ್ಯೆಯ ಆಳದಲ್ಲಿ ಇರುವ ಜಾತಿ, ವರ್ಗ,ಪಿತೃಪ್ರಧಾನತೆಯ ಹರವನ್ನೂ, ಪ್ರಭುತ್ವದ ಪಿತೃಪ್ರಧಾನತೆಯ ಆಯಾಮವನ್ನೂ ಗುರುತಿಸಿಯೇ ಹೋರಾಡಿದೆ. ಶ್ರಮಿಕ ವರ್ಗದ ಮಹಿಳೆಯರಿಗೆ ನಿರಂತರವಾಗಿ ಸ್ಪಂದಿಸಲು ಸಾಧ್ಯವಾಗದ ಹಾಗೆ ದಲಿತ ಮಹಿಳಾ ಪ್ರಶ್ನೆಗಳಿಗೆ ಕೂಡಾ ನಿರಂತರವಾಗಿ ಸ್ಪಂದಿಸಲು ಮಹಿಳಾ ಚಳವಳಿಗೆ ಸಾಧ್ಯವಾಗದಿರಬಹುದು. ಕರ್ನಾಟಕದ ಹಂತದಲ್ಲಿ ಮೂಡಿ ಬರದ ಸಾಮೂಹಿಕ ದಲಿತ ಮಹಿಳಾ ನಾಯಕತ್ವದ ಕೊರತೆಯಿಂದಾಗಿಯೂ ಸಹ ದಲಿತ ಮಹಿಳಾ ಪ್ರಶ್ನೆ ಹಿನ್ನಲೆಗೆ ಸರಿಯುವಂತಾಗಿದೆ. ಕರ್ನಾಟಕಕ್ಕೆ ಹೋಲಿಸಿದಲ್ಲಿ ಮಹಾರಾಷ್ಟ್ರದಲ್ಲಿ ದಲಿತ ಮಹಿಳಾ ಚಳವಳಿ ಅದರದೇ ಆದ ಛಾಪನ್ನು ಮೂಡಿಸಿದೆ. ಮಹಿಳಾ ದಿನವನ್ನು ಅಂಬೇಡ್ಕರ್ ಜಯಂತಿಯಂದು ಆಚರಿಸುವುದರ ಜೊತೆಗೆ ಜಾತಿ ಆಧರಿತ ಸಮಸ್ಯೆಗಳ ಸುತ್ತ ಹೋರಾಡುತ್ತಲೇ ಮಹಾರಾಷ್ಟ್ರದ ದಲಿತ ಮಹಿಳಾ ಚಳವಳಿ ಸ್ವಾಯತ್ತ ಮಹಿಳಾ ಚಳವಳಿಗೆ ಅನೇಕ ಸವಾಲುಗಳನ್ನು ಒಡ್ಡುತ್ತಿವೆ. ಮಹಾರಾಷ್ಟ್ರದಲ್ಲಿ ದಲಿತ ಮಹಿಳಾ ಚಳುವಳಿಯ ಅಸ್ತಿತ್ವಕ್ಕೆ ಕಾರಣಗಳನ್ನು ಅಲ್ಲಿಯ ಬಂಡವಾಳಶಾಹಿತ್ವ ಆರ್ಥಿಕ ಬೆಳವಣಿಗೆಯ ಇತಿಹಾಸದಲ್ಲಿಯೇ ಗುರುತಿಸಬೇಕಾಗುತ್ತದೆ. ಪ್ರಾರಂಭದಲ್ಲಿಯೇ ಹೇಳಿದ ಹಾಗೆ ಕರ್ನಾಟಕದ ಹಂತದಲ್ಲಿ ಇಂದು ಅನೇಕ ಚಳವಳಿಗಳು ನಡೆಯುತ್ತಿವೆ. ಬಹು ಸ್ತರದ ಮಹಿಳೆಯರು ಇಂದು ಬೀದಿಗಿಳಿದಿದ್ದಾರೆ. ಈ ಎಲ್ಲವನ್ನೂ ಹಾಗೂ ಎಲ್ಲರನ್ನೂ ಒಳಗೊಳ್ಳುವ ಹಾಗೂ ಬಹುರೂಪಿ ಸಂಸ್ಕೃತಿಯನ್ನು ತನ್ನ ಒಡಲಲ್ಲಿ ಹುದುಗಿಸಿಕೊಳ್ಳುವ ಹೋರಾಟದ ಚಳವಳಿಯ ತಾತ್ವಿಕತೆ, ದಾರ್ಶನಿಕತೆಯೊಂದರ ಅಗತ್ಯದ ಬಗ್ಗೆ ನಾವು ಮನಗಾಣಬೇಕಿದೆ.

❑

ಒಳಗಿನ ಪುಟಗಳಲ್ಲಿ....



**ಓದುಗರಲ್ಲಿ ಮನವಿ**

ಜಾಗತೀಕರಣದ ಇಂದಿನ ಸಂದರ್ಭದಲ್ಲಿ 'ನಮ್ಮ ಮಾನಸ'ದಂತಹ ಸಣ್ಣ ಪತ್ರಿಕೆಗೆ ಓದುಗರೇ ಜೀವಾಳ. ಪತ್ರಿಕೆಗೆ ಚಂದಾದಾರರಾಗುವ ಮೂಲಕ ಹಾಗೂ ಈ ವರ್ಷದ ಚಂದಾ ನವೀಕರಿಸುವ ಮೂಲಕ ಪತ್ರಿಕೆಯ ಪ್ರಕಟಣೆಗೆ ಸಹಕಾರ ನೀಡಿ.



# ಬಾಲ್ಯ ವಿವಾಹ ಅಂತರ್ಜಾತಿ ವಿವಾಹ ಒಪ್ಪಿಗೆ ವಯಸ್ಸು ಇತ್ಯಾದಿ...

■ ಡಾ. ಎಚ್. ಎಸ್. ಅನುಪಮಾ

ಬಾಲ್ಯವಿವಾಹ, ಒಳವಿವಾಹ ಹಾಗೂ ವಿಧವಾ ಪದ್ಧತಿ – ಇವು ಮೂರೂ ಭಾರತೀಯ ವಿವಾಹ ವ್ಯವಸ್ಥೆಯ ಮುಖ್ಯ ಆಚರಣೆಗಳು. ಅವು ಮಹಿಳೆಗೆ ಆಯ್ಕೆಯ ಮುಕ್ತ ಅವಕಾಶ ನೀಡದೇ, ಹೆಣ್ಣೆಂದರೆ 'ಒಪ್ಪಿಗೆ'ಯೆಂದು ತಲೆ ಅಲ್ಲಾಡಿಸ ಬೇಕಾದವಳು ಎಂದೇ ಭಾವಿಸಿವೆ. ಸ್ವಾತಂತ್ರ್ಯ ಪೂರ್ವ ಕಾಲದಲ್ಲಿ ರಾಜಾರಾಂ ಮೋಹನ್‌ರಾಯ್‌ರಂತಹ ಇಂಗ್ಲಿಷ್ ವಿದ್ಯಾಭ್ಯಾಸ ಪಡೆದ ಸಮಾಜಸುಧಾರಕರನೇಕರು ಬದಲಾವಣೆಗೆ ಶ್ರಮಿಸಿ ಸತಿಪದ್ಧತಿ ನಿಂತು ಹೋಗಿ, ವಿಧವಾ ವಿವಾಹ ಪದ್ಧತಿಯಲ್ಲಿ ಗಮನಾರ್ಹ ಬದಲಾವಣೆ ಕಂಡುಬಂದಿದೆ. ಆದರೆ ಜಾಗತೀಕರಣದ ಕಾಲದಲ್ಲಿಯೂ ಬಾಲ್ಯವಿವಾಹ ಮತ್ತು ಒಳವಿವಾಹ ಪದ್ಧತಿಗಳು ಮುಂದುವರೆದಿವೆ. ಗ್ರಾಮೀಣ ಪ್ರದೇಶಗಳಲ್ಲಿ ಅವ್ಯಾಹತವಾಗಿ ನಡೆಯುತ್ತಿರುವ ಬಾಲ್ಯ ವಿವಾಹ ತಡೆಗೆ ಸರ್ಕಾರ ಕಾನೂನು ಮಾಡಿದೆ. ಸರ್ಕಾರೇತರ ಸಂಘಸಂಸ್ಥೆಗಳು ಕೈಜೋಡಿಸಿವೆ. ಶಿಕ್ಷಣವು ಹಕ್ಕಾಗಿರುವ; ಮಹಿಳಾ ಸಬಲೀಕರಣ, ಮಹಿಳಾ ದಿನಾಚರಣೆ ಶತಮಾನೋತ್ಸವ ವರ್ಷ, ಮಹಿಳಾ ಚಳುವಳಿ ಎಂದೆಲ್ಲ ಮಾತನಾಡುತ್ತಿರುವ; ಹೆಣ್ಣುಮಕ್ಕಳಿಗೆ ಭಾಗ್ಯಜ್ಯೋತಿ, ಮಡಿಲು, ಬಾಲಿಕಾ ಸಮೃದ್ಧಿ ಯೋಜನೆ, ತಾಳಿಭಾಗ್ಯದಂತಹ ಯೋಜನೆಗಳು ಜಾರಿಯಾಗಿರುವ ಈ ಹೊತ್ತಲ್ಲಿ ಐವರಲ್ಲಿ ಇಬ್ಬರು ಹುಡುಗಿಯರು 18 ವರ್ಷದೊಳಗೇ ಮದುವೆಯಾಗಿರುತ್ತಾರೆಂಬ ಅಂಶ ದಿಗಿಲುಗೊಳಿಸುತ್ತದೆ. ಹಾಗಾದರೆ ಈ ಎಲ್ಲ ಕಾರ್ಯಕ್ರಮಗಳೂ ಯಾರನ್ನು ತಲುಪುತ್ತಿವೆ? 'ಬಾಲ್ಯವಿವಾಹ ನಿಷೇಧ ಕಾಯ್ದೆ–2006' ಹುಡುಗಿಯು 18 ವರ್ಷಕ್ಕಿಂತ ಕಡಿಮೆಯಿದ್ದಲ್ಲಿ ಹಾಗೂ ಹುಡುಗ 21 ವರ್ಷಕ್ಕಿಂತ ಕಡಿಮೆ ಇದ್ದಲ್ಲಿ ಅವರನ್ನು ಅಪ್ರಾಪ್ತ ವಯಸ್ಕರೆಂದು ಪರಿಗಣಿಸುತ್ತದೆ. ಆದರೆ 'ಸಿಲಿಕಾನ್ ವ್ಯಾಲಿ' ಬೆಂಗಳೂರು ಎಂಬ ಗಾಜಿನ ನಗರವನ್ನು ತನ್ನ ಹೃದಯದಲ್ಲಿ ಹೊತ್ತ ಮುಂದುವರಿದ ರಾಜ್ಯ ಕರ್ನಾಟಕದಲ್ಲಿ ಹೆಚ್ಚುಕಡಿಮೆ 40% ಮದುವೆಗಳಲ್ಲಿ ಹುಡುಗಿ ಅಪ್ರಾಪ್ತ ವಯಸ್ಕಳಾಗಿರುತ್ತಾಳೆ. ಮದುವೆಗಳು ಕಡ್ಡಾಯ ನೋಂದಾವಣೆ ಆಗದೇ ಇರುವುದರಿಂದ ಹಾಗೂ ವಯಸ್ಸಿನ ಕುರಿತ ಪ್ರಮಾಣ ಪತ್ರ ಇಲ್ಲದಿರುವುದರಿಂದ ನಿಜವಾದ ಅಂಕಿಅಂಶ ದೊರೆಯುತ್ತಿಲ್ಲ.

ಅಂತರರಾಷ್ಟ್ರೀಯ ಮಹಿಳಾ ಸಂಶೋಧನಾ ಸಂಸ್ಥೆಯ ಪ್ರಕಾರ 18 ವರ್ಷದೊಳಗೆ ಹೆಣ್ಣುಮಕ್ಕಳು ಮದುವೆಯಾಗುವ ವಿಶ್ವದ ಮೊದಲ 20 ರಾಷ್ಟ್ರಗಳ ಪೈಕಿ ಭಾರತ 11ನೇ ಸ್ಥಾನದಲ್ಲಿದೆ. ರಾಜಸ್ಥಾನದಲ್ಲಿ ಮೊದಲ ಸಲ ತಾಯಿಯಾಗುವ ಮಹಿಳೆಯ ಸರಾಸರಿ ವಯಸ್ಸು 16.3 ವರ್ಷ! ದಕ್ಷಿಣ ಭಾರತದಲ್ಲಿ ಉತ್ತರ ಭಾರತಕ್ಕಿಂತ ಬಾಲ್ಯ ವಿವಾಹ ಕಡಿಮೆಯಿದ್ದರೂ, 2009ರ ಕರ್ನಾಟಕ ಮಕ್ಕಳ ಹಕ್ಕು ಸಮೀಕ್ಷಾ ವರದಿಯ ಪ್ರಕಾರ ಉತ್ತರ ಕರ್ನಾಟಕದಲ್ಲಿ ಬಾಲ್ಯ ವಿವಾಹ ಹೆಚ್ಚಾಗಿ ಕಂಡುಬರುತ್ತದೆ. ಅತಿ ಹೆಚ್ಚು – 60% – ರಾಯಚೂರಿನಲ್ಲಾದರೆ, ಕೊಪ್ಪಳ – 51.4%, ಬಿಜಾಪುರ 50.1%, ಗುಲ್ಬರ್ಗ – 48.9%, ಬಾಗಲಕೋಟೆ – 48.3%, ಬೆಳಗಾವಿ 43%, ಬೀದರ್ ಮತ್ತು ಗದಗ – 44%, ಬಳ್ಳಾರಿ – 35% ಇವು ಬಾಲ್ಯವಿವಾಹ ಹೆಚ್ಚು ಸಂಭವಿಸುವ ಜಿಲ್ಲೆಗಳಾಗಿವೆ. ಅದೇ ದಕ್ಷಿಣ ಕರ್ನಾಟಕದಲ್ಲಿ ಬೆಂಗಳೂರು ಗ್ರಾಮಾಂತರ – 29%, ಕೋಲಾರ –24.3%, ಬೆಂಗಳೂರು ನಗರ – 12.4%, ಶಿವಮೊಗ್ಗ – 9%, ಉತ್ತರ ಕನ್ನಡ – 7.8%, ಚಿಕ್ಕಮಗಳೂರು – 6.8%, ದಕ್ಷಿಣಕನ್ನಡ – 5.5%, ಕೊಡಗು 2.2% ಇದ್ದು, ಎಲ್ಲಕ್ಕಿಂತ ಅತಿ ಕಡಿಮೆ ಉಡುಪಿ ಜಿಲ್ಲೆಯಲ್ಲಿ 1.1% ವಿವಾಹ ಬಾಲ್ಯವಿವಾಹವಾಗಿದೆ.

ಬಾಲ್ಯವಿವಾಹವು ವರಮಾನ ಮತ್ತು ಶಿಕ್ಷಣ ಮಟ್ಟ ಕಡಿಮೆಯಿದ್ದಷ್ಟು ಹೆಚ್ಚುತ್ತ ಹೋಗಿರುವುದು ಕಂಡುಬರುತ್ತದೆ. ಕನ್ಯಾಪಿತೃಗಳು ಒಳ್ಳೆಯ ವರ ಸಿಕ್ಕರೆ ಇಬ್ಬರಿಗೂ ಎಷ್ಟೇ ವಯಸ್ಸಾದರೂ ಮದುವೆಗೆ ಸಿದ್ಧರಾಗುತ್ತಾರೆ. ಹುಡುಗಿ ಎಳೆಯವಳಾದಷ್ಟು ಜೊತೆಗೆ ಕೊಡಬೇಕಾದ ದಕ್ಷಿಣೆ 'ಕಮ್ಮಿ'ಯಿರುತ್ತದೆ. ವಯಸ್ಸಿಗೆ ಬಂದ ಮಗಳನ್ನು ಮನೆಯಲ್ಲಿಟ್ಟುಕೊಳ್ಳುವುದೆಂದರೆ 'ಸೆರಗಲ್ಲಿ ಕೆಂಡ ಕಟ್ಟಿಕೊಂಡಂತೆ' ಎಂಬ ಭಾವನೆ ಬಲವಾಗಿದೆ. ಮನೆತನದ ಮರ್ಯಾದೆ ಹುಡುಗಿಯರ ಕೈಲಿದೆ ಎಂದು ಭಾವಿಸುವ ಕುಟುಂಬಗಳು ಪೋರಿಯು ಹೊರಜಗತ್ತಿಗೆ ಕಣ್ಣುಬಿಟ್ಟು ಸ್ವಪ್ರಜ್ಞೆ ಬೆಳೆಸಿಕೊಳ್ಳುವಷ್ಟರಲ್ಲಿ ಮದುವೆ ಮಾಡುತ್ತಾರೆ. ಅದರಲ್ಲೆಷ್ಟೋ ಹುಸಿ ಮದುವೆಗಳಾಗಿ, ಎಳೆ ಹುಡುಗಿಯರನ್ನು ವೇಶ್ಯಾವಾಟಿಕೆಗೆ ಸಾಗಿಸುವುದು, ಎಳೆತನದಲ್ಲೇ ಹೆರುವ ಹೆಣ್ಣು ಮತ್ತು ಅವಳ ಮಗು ಮೆಡಿಕಲ್ ಕಾಂಪ್ಲಿಕೇಷನ್ನುಗಳಿಗೆ ತುತ್ತಾಗುವುದು ಕಂಡುಬರುತ್ತದೆ. ಜಾತ್ರೆ, ಉತ್ಸವಗಳಲ್ಲಿ ನಡೆಯುವ ಸಾಮೂಹಿಕ ವಿವಾಹಗಳಲ್ಲಿ 10%ಕ್ಕಿಂತ ಹೆಚ್ಚು ಬಾಲ್ಯವಿವಾಹವೇ ಆಗಿದ್ದು, ಊರಹಿರಿಯರ ಸಮ್ಮತಿ, ಆಶೀರ್ವಾದ ಪಡೆದೇ ನಡೆಯುವುದರಿಂದ ಮತ್ತು ಬಾಲ್ಯವಿವಾಹ ತಪ್ಪೆಂಬ ಭಾವವೇ ಇಲ್ಲದಿರುವುದರಿಂದ ಸಮಸ್ಯೆ ಇನ್ನಷ್ಟು

ಉಲ್ಲಂಘನೆಗೊಂಡಿದೆ. ಹೆತ್ತವರೇ ದೊಡ್ಡವಳ ಜೊತೆ ಸಣ್ಣವಳದ್ದೂ ಎಂದು ಜೋಡಿ ಮದುವೆಯಲ್ಲಿ ಖರ್ಚು ಕಡಿಮೆ ಮಾಡಿಕೊಳ್ಳಲು ಯತ್ನಿಸುವಾಗ ಯಾರನ್ನು ದೂರಬಹುದು? ಮಹಿಳಾ ಸ್ವಸಹಾಯ ಗುಂಪುಗಳ ಮೀಟಿಂಗುಗಳಲ್ಲಿ ಈ ವಿಷಯ ಎತ್ತಿದರೆ, 'ಅದೊಂದು ವಿಷಯ ಬಿಟ್ಟು ಬೇರೆ ಏನಾದ್ರೂ ಹೇಳಿ' ಎಂಬ ಬೇಡಿಕೆ ಬರುವುದಂತೆ! ಮದುವೆ ಎನ್ನುವುದು ಸಂಪೂರ್ಣ ಕುಟುಂಬದ ವಿಷಯ. ಅದರಲ್ಲಿ ಬೇರೆಯವರಾರೂ ತಲೆ ಹಾಕುವಂತಿಲ್ಲ, ಅದು ಸಾರ್ವಜನಿಕ ಚರ್ಚೆಯೂ ಅಲ್ಲ ಎಂಬ ಧೋರಣೆ ಇದೆ.

ಈ ಹಿನ್ನೆಲೆಯಲ್ಲಿ ಭಾರತೀಯ ಸಮಾಜದಲ್ಲಿ ಮದುವೆಯ ಕುರಿತು ಸುಧಾರಣೆಯಾಗಲು ಇನ್ನೂ ಬಹಳಷ್ಟಿದೆ. ಇಲ್ಲಿ ಬಾಲ್ಯವಿವಾಹ ಸಿಂಧು, ಅಂತರ್ಜಾತಿ ವಿವಾಹ ಅಪರಾಧ. ಆದರೆ ವರದಕ್ಷಿಣೆ ಮಾತ್ರ ಸರ್ವಮಾನ್ಯ! ಇದರ ಇತಿಹಾಸವೂ ಕುತೂಹಲಕಾರಿಯಾಗಿದೆ.

* * *

ಮಹಿಳೆಯರ ಸಮಸ್ಯೆಗಳ ಮೂಲವು ಪುರುಷ ಪ್ರಧಾನ ಸಮಾಜದ ಹೃದಯದಲ್ಲಿದೆ. ಮೇಲ್ಜಾತಿ ಆಚರಣೆಗಳು ಕಟ್ಟುನಿಟ್ಟಾದ ನಿರ್ಬಂಧ ಹೊಂದಿದ್ದು ಬಾಲ್ಯವಿವಾಹ ಎನ್ನುವುದು ತಳಿ ಶುದ್ಧತೆ ಕುರಿತ ಅತಿರೇಕದ ಕಲ್ಪನೆಯ ಪ್ರತಿಫಲವಾಗಿದೆ. ಜಾತಿಶುದ್ಧತೆ ಕಾಯ್ದುಕೊಳ್ಳುವುದು ಹೇಗೆಂದರೆ ಹುಡುಗಿ ಸಂತಾನೋತ್ಪತ್ತಿ ಸಾಮರ್ಥ್ಯ ಗಳಿಸಿದ ಕೂಡಲೇ ಅವಳನ್ನು ಅವಳದೇ ಜಾತಿಯ ವರನಿಗೆ ಮಾತ್ರ ಲಭ್ಯವಾಗುವಂತೆ ಮೊದಲೇ ಮದುವೆ ಮಾಡಿಬಿಡುವುದು; ಮೊಟ್ಟಮೊದಲ ಋತುಸ್ರಾವ ವಾದ 16ನೇ ದಿನವೇ ಹುಡುಗಿಗೆ ಅವಳ ಗಂಡ 'ಗರ್ಭಾದಾನ' ಮಾಡಲು ಅನುಕೂಲವಾಗುವಂತೆ ಮೊದಲೇ ಮದುವೆ ಮುಗಿಸುವುದು. ಮಹಾರಾಷ್ಟ್ರದ ಪೇಶ್ವೆಗಳು ಬ್ರಾಹ್ಮಣ್ಯದ ಪರಿಶುದ್ಧತೆಯನ್ನು ಎತ್ತಿಹಿಡಿಯಲು ಬಾಲ್ಯವಿವಾಹವನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದಿದ್ದರು. ಆದರೆ ವಸಾಹತುಶಾಹಿ ಆಗಮನದೊಂದಿಗೆ ಭಾರತೀಯ ಚಿಂತನಾಕ್ರಮವೂ ಸ್ವಲ್ಪ ಬದಲಾವಣೆ ಕಂಡಿತು. ಜಾತಿಶುದ್ಧತೆಯನ್ನು ನಿರಾಕರಿಸುವ ಅಂತರ್ಜಾತಿ ಮದುವೆಗಳೂ, ಜಾತಿಯ ಚೌಕಟ್ಟಿನಲ್ಲಿ ಒಪ್ಪಿಗೆ ಪಡೆಯದ ವಿಧವಾ ವಿವಾಹವೂ ಹೆಚ್ಚುಕಡಿಮೆ ಈ ಸಮಯದಲ್ಲೇ ಮುನ್ನೆಲೆಗೆ ಬಂದವು. 1829ರಲ್ಲಿ ಸತಿಪದ್ಧತಿ ನಿರ್ಮೂಲನಾ ಕಾಯಿದೆ, 1856ರಲ್ಲಿ ವಿಧವಾ ಪುನರ್ವಿವಾಹ ಕಾಯಿದೆ ಜಾರಿಯಾದರೂ ಬಾಲ್ಯವಿವಾಹ ನಿಷೇಧ ಕಾಯ್ದೆ ಜಾರಿಯಾಗಲು ಹಲವು ವರ್ಷ ಕಾಯ ಬೇಕಾಯಿತು. ಈಶ್ವರಚಂದ್ರ ವಿದ್ಯಾಸಾಗರ, ಬೆಹ್ರಾಮ್ ಮಲಬಾರಿ ಯಂತಹ ಹಲವರ ಪ್ರಯತ್ನದಿಂದ ಬಾಲ್ಯವಿವಾಹ ನಿಷೇಧ ಕಾನೂನು 1930ರಲ್ಲಿ ಜಾರಿಯಾಯಿತು.

1872ರಲ್ಲಿ ಬ್ರಿಟಿಷ್ ಆಡಳಿತ 'ಸಿವಿಲ್ ಮದುವೆ ಕಾಯಿದೆ' ಜಾರಿಗೊಳಿಸಿ, ಅದರಲ್ಲಿರುವ ಆಕ್ಟ್ 3 ಭಾರತದಲ್ಲಿ ಮೊದಲಬಾರಿ 'ನಾಗರಿಕ ವಿವಾಹ' ಎಂಬ ಪದವನ್ನು ವರ್ಣಿಸಿತು. ಅಂತರ್ಜಾತಿ ವಿವಾಹಗಳು ಕಾನೂನುರೀತ್ಯಾ ಮಾನ್ಯವಾದ ಮೊದಲ ಕಾಯ್ದೆ ಇದು. ಈ ಕಾನೂನಿನನ್ವಯ ಗಂಡು ಹೆಣ್ಣು ಭಾರತೀಯರಾಗಿದ್ದು, ಇಬ್ಬರೂ ವಯಸ್ಕರಾಗಿದ್ದು, ಪರಸ್ಪರ ಒಪ್ಪಿಗೆ ಇದ್ದಲ್ಲಿ ಅವರ ಜಾತಿ ಬೇರೆಬೇರೆ ಯಾಗಿದ್ದರೂ ಅವರ ಪಾಲಕ, ಪೋಷಕ ಮತ್ತು ಜಾತಿ ಸಮುದಾಯ ಒಪ್ಪದೇ ಇದ್ದರೂ ಅವರು ಕಾನೂನುರೀತ್ಯಾ ಸತಿಪತಿಗಳಾಗಿರಲು ಸಾಧ್ಯವಿತ್ತು. ಈ ಕಾನೂನು ಪ್ರೇಮವಿವಾಹವನ್ನು ಮಾನ್ಯ ಮಾಡಿದ್ದರಿಂದ ತೀವ್ರ ವಿರೋಧ ಬಂತು. ಮದುವೆ ಸಮಯದಲ್ಲಿ ಮಧ್ಯವರ್ತಿ ಆಗಬೇಕಾದ್ದು ಸಮುದಾಯವೇ (ಜಾತಿ) ಹೊರತು ಪ್ರಭುತ್ವವಲ್ಲ, ಮದುವೆಯಲ್ಲಿ ವ್ಯಕ್ತಿಗಿಂತ ಸಮಾಜಕ್ಕೇ ಪ್ರಾಧಾನ್ಯ, ಹಾಗಾಗಿ ಇಂಥ ಮದುವೆಗಳು ಅನೈಸರ್ಗಿಕ ಎಂದೂ ದೂರಲಾಯಿತು.

ಅಂದಿನ ಸಮಾಜಕ್ಕೆ ಜಾತಿ ಬಿಟ್ಟು ಆದ ಮದುವೆಯನ್ನು ಕಾನೂನುಬದ್ಧ ಎಂದು ಊಹಿಸಿಕೊಳ್ಳುವುದು ತುಂಬ ಕಷ್ಟವಿತ್ತು. ಈ ಕಾಯ್ದೆ ವಿರುದ್ಧ ತೀವ್ರ ದಾಳಿಯಾಗಿ, ಇದರ ಅನುಷ್ಠಾನದಿಂದ ಸಮಾಜದ ರಚನೆ, ಏಣಿಶ್ರೇಣಿ ಅಷ್ಟೇಅಲ್ಲ ಇಡೀ ವ್ಯವಸ್ಥೆಯೇ ಹಾಳಾಗುವುದೆಂದು ದೂರಿ ಸರ್ಕಾರಕ್ಕೆ ಮನವಿ ಸಲ್ಲಿಸಲಾಯಿತು. ಅಂತರ್ಜಾತಿ ಮದುವೆಯಾದವರು ದ್ವೇಷಕ್ಕೊಳಗಾದರು ಹಾಗೂ ಅವರ ಮಕ್ಕಳನ್ನು 'ಬೆರಕಿ ಮಕ್ಕಳು' (ಬಾಸ್ಟರ್ಡ್ಸ್) ಎನ್ನಲಾಯಿತು. ಒಬ್ಬರಂತೂ ಅದರ ವಿರುದ್ಧ ಬರೆಯುತ್ತಾ, 'ಜಗತ್ತಿನ ಯಾವ ಭಾಗದಲ್ಲೂ ಇಲ್ಲದ, ಭಾರತದಲ್ಲಿ ಮಾತ್ರ ಇರುವ ಮಹತ್ವದ ವಿಷಯ ರಕ್ತ ಶುದ್ಧಿಯದು. ಇಲ್ಲಿ ಪ್ರತಿ ಜಾತಿಯೂ ತನ್ನ ರಕ್ತ ಶುದ್ಧಿಯನ್ನು ಕಾಪಾಡಿಕೊಂಡು ಬರುತ್ತಿದೆ' ಎಂದು ಒಳವಿವಾಹ ವ್ಯವಸ್ಥೆಯ ಬಗ್ಗೆ ಹೆಮ್ಮೆ ಪಟ್ಟರು. 'ಭಾರತೀಯ ನಾರಿಯ ಪಾತಿವ್ರತ್ಯ ದಂತಕಥೆಯಾಗಿದೆ' ಎಂದು ಇನ್ನೊಬ್ಬರೆಂದರು. 'ಭಾರತೀಯ ಮಹಿಳೆಯೆಂದರೆ ನೈತಿಕ ಸಂತತಿಯನ್ನು ಹೆರುವವಳು' ಎಂದು ಮಗದೊಬ್ಬರೆಂದರು. ಖುದ್ದು ನ್ಯಾಯಾಧೀಶ ರೊಬ್ಬರು (ಲಕ್ಷ್ಮೀನಾರಾಯಣ) 'ಪಾಲಕರು ತಮ್ಮ ಮಗಳನ್ನು ಕೊಂದಾರೇ ವಿನಹ ಬೇರೆ ಜಾತಿಯವನಿಗೆ ಕೊಟ್ಟು ಮದುವೆ ಮಾಡಲಾರರು' ಎಂದು ಸರ್ಕಾರಕ್ಕೆ ಪತ್ರ ಬರೆದರು.

ಈ ಎಲ್ಲ ಪ್ರತಿರೋಧದಿಂದ ಒಂದು ಬದಲಾವಣೆಯಾಯಿತು. ಮೊದಲು ಮದುವೆಗೆ ಮುಂಚೆ 5 ದಿನ ಹಾಗೂ ನಂತರ 5 ದಿನ ಯಾವುದೇ ತಕರಾರು ಬರದೇ ಇದ್ದಲ್ಲಿ ಮದುವೆ ಊರ್ಜಿತ ಎಂದು ಹೇಳಲಾಗಿದ್ದರೆ, ನಂತರ ಆ ಅವಧಿಯನ್ನು 15 ದಿವಸಗಳಿಗೇರಿಸ ಲಾಯಿತು. ಈಗ ಆ ಅವಧಿಯನ್ನು ಒಂದು ತಿಂಗಳು ಮೊದಲು, ಒಂದು ತಿಂಗಳು ನಂತರ ಎಂದು ನಿಗದಿಗೊಳಿಸಲಾಗಿದೆ. ಕೊನೆಗೂ ಕಾಯ್ದೆ ಜಾರಿಯಾಗಿ ಹೆಣ್ಣಿನ ವಯಸ್ಸನ್ನು 18ರಿಂದ 21ಕ್ಕೇರಿಸಿದಾಗ, ರೆಸಿಡೆನ್ಸ್ ರಿಕ್ವೈರ್‌ಮೆಂಟನ್ನು 15 ದಿನಗಳಿಗೇರಿಸಿದಾಗ ಪ್ರೇಮವಿವಾಹಗಳು ಅಪರಾಧದಂತೆ, ಸಮಾಜಬಾಹಿರವೆಂಬಂತೆ ಬಿಂಬಿಸಲ್ಪಟ್ಟವು. ಇದು ಹೆಚ್ಚುಕಡಿಮೆ ಇಂದೂ ಹಾಗೆಯೇ ಮುಂದುವರೆದುಕೊಂಡು ಬಂದಿದೆ.

ನಾಗರಿಕ ಮದುವೆ ಮತ್ತು ಅತ್ಯಾಚಾರ ಕಾಯ್ದೆ ಮಾಡುವಾಗ ಮತ್ತೊಂದು ವಿಷಯ ಅನಾಯಾಸವಾಗಿ ಗಮನ ಸೆಳೆಯಿತು. ಅದು ಮದುವೆಗಾಗಿನ ಒಪ್ಪಿಗೆ. 1861ರಲ್ಲಿ 'ಒಪ್ಪಿಗೆ ವಯಸ್ಸು ಕಾಯ್ದೆ' (ಏಜ್ ಆಫ್ ಕನ್ಸೆಂಟ್ ಬಿಲ್) ಜಾರಿಯಾಯಿತು. ಅದರ ಪ್ರಕಾರ ಮದುವೆ ಯಾಗಿದ್ದರೂ ಲೈಂಗಿಕ ಸಂಪರ್ಕಕ್ಕೆ ಒಪ್ಪಿಗೆ ಕೊಡಲು ಹೆಣ್ಣಿಗೆ 10 ವರ್ಷ ಆಗಿರಬೇಕು ಎಂದು ನಿಗದಿಯಾಗಿತ್ತು. ಅದುವರೆಗೂ ಭಾರತ ಸಮಾಜದಲ್ಲಿ ಮದುವೆಗೆ ಹೆಣ್ಣಿನ ಒಪ್ಪಿಗೆ ಪಡೆಯುವ ಪರಿಪಾಠವೇ ಇರಲಿಲ್ಲ. ಒಪ್ಪಿಗೆ ಮತ್ತು ಸ್ವತಂತ್ರ ಅಭಿವ್ಯಕ್ತಿ ಈ ಎರಡಕ್ಕೂ ಒಂದು ಕನಿಷ್ಠ ವಯಸ್ಸಾಗಿರಬೇಕೆಂದು ಯಾರೂ ಭಾವಿಸಿರಲಿಲ್ಲ. ಅಲ್ಲದೇ ಬಾಲ್ಯ ವಿವಾಹವೇ ಸಾಮಾನ್ಯವಾಗಿದ್ದ ಕಾಲದಲ್ಲಿ ಒಪ್ಪಿಗೆ ಎಂದರೆ ಹುಡುಗ-ಹುಡುಗಿಯ ಪಾಲಕ-ಪೋಷಕರ ಒಪ್ಪಿಗೆಯೇ ಆಗಿತ್ತು.

ಒಂದು ವಿವಾದಗ್ರಸ್ತ ಕೇಸು 1880ರಲ್ಲಿ ವಿಚಾರಣೆಗೆ ಬಂತು. ಅದು ಒಪ್ಪಿಗೆ ವಯಸ್ಸಿನ ವಿವಾದವನ್ನು ಮುನ್ನೆಲೆಗೆ ತಂದಿತು. ಮುಂಬಯಿಯ ರುಕ್ಮಾಬಾಯಿ ಎಂಬ 22 ವರ್ಷದ ಮಹಿಳೆ 11 ವರ್ಷದ ಹುಡುಗಿಯಾಗಿದ್ದಾಗ ದಾದಾಜಿಯನ್ನು ಮದುವೆಯಾಗಿದ್ದಳು. ಅವರ ಬಡಗಿ ಸಮುದಾಯವು ಆಗ ಮುಂಬಯಿಯಲ್ಲಿ ಸಾಕಷ್ಟು ಸ್ಥಿತಿವಂತರಾಗಿದ್ದ ಕಾಲ. ರುಕ್ಮಾಬಾಯಿಗೆ ತಂದೆಯಿರಲಿಲ್ಲ. ಅವಳ ತಾಯಿ ಸಮಾಜಸೇವಕರಾಗಿದ್ದ ವೈದ್ಯರೊಬ್ಬರನ್ನು ಎರಡನೇ ಮದುವೆ ಯಾಗಿದ್ದರಿಂದ ಆಸ್ತಿಗೆ ರುಕ್ಮಾಬಾಯಿ ಏಕೈಕ ಹಕ್ಕುದಾರಳಾಗಿದ್ದಳು. ತನ್ನ ಮಲತಂದೆಯ ಪ್ರೋತ್ಸಾಹದಿಂದ ರುಕ್ಮಾಬಾಯಿ ವಿದ್ಯಾಭ್ಯಾಸ

ಮುಂದುವರೆಸಿದಳು. ದಾದಾಜಿ ಮನೆ ಅಳಿಯನಾಗಿ ಬಂದ. ಹೀಗೇ 8–9 ವರ್ಷ ಕಳೆಯಿತು. ರುಕ್ಮಾಬಾಯಿ ವಯಸ್ಕಳಾದರೂ ಅವರಿಬ್ಬರ ನಡುವೆ ದೈಹಿಕ ಸಂಪರ್ಕ ಏರ್ಪಡಲಿಲ್ಲ. ದಾದಾಜಿಯನ್ನು ರುಕ್ಮಾಬಾಯಿ ಒಪ್ಪಿಕೊಳ್ಳದ್ದರಿಂದ ಅವನು ತನ್ನ ಮನೆಗೆ ಹೋಗಿ ಅವಳನ್ನು ಅಲ್ಲಿಗೇ ಬರುವಂತೆ ಕೇಳಿದ. ಆದರೆ ರುಕ್ಮಾಬಾಯಿ ಬೇರೊಬ್ಬರ ಆಶ್ರಯದಲ್ಲಿರ ತೊಡಗಿದಳು. ಮದುವೆಯಾಗಿದ್ದರೂ ಅವರಿಬ್ಬರೂ ದೂರವಿದ್ದು ಆದಾಗಲೇ 11 ವರ್ಷ ಆಗಿತ್ತು. ರುಕ್ಮಾಬಾಯಿಯು ಅನಾಮಿಕ ಹೆಸರುಗಳಲ್ಲಿ ಸುದ್ದಿ ಪತ್ರಿಕೆಗಳಿಗೆ ಬಾಲ್ಯವಿವಾಹ ಹಾಗೂ ವಿಧವಾ ಪದ್ಧತಿಗಳನ್ನು ಅನಿಷ್ಟವೆಂದು ಟೀಕಿಸಿ ಬರೆಯುತ್ತಿದ್ದಳು. ಅಲ್ಲದೇ ಜಾತಿಯ ಚೌಕಟ್ಟು ಇರುವುದರಿಂದ ಹೆಣ್ಣಿನ ಆಯ್ಕೆಗೆ ಮುಕ್ತ ಅವಕಾಶಗಳಿಲ್ಲ ಎಂದೂ ದೂರಿದ್ದಳು. ಆಗ ದಾದಾಜಿ ಕೋರ್ಟಿಗೆ ಹೋದ. ಕೋರ್ಟಿನಲ್ಲಿ ರುಕ್ಮಾಬಾಯಿ ತನಗೆ ಅಪ್ರಾಪ್ತ ವಯಸ್ಸಿದ್ದಾಗಲೇ ಮದುವೆ ಮಾಡಿದ್ದು, ತಾಯ್ತಂದೆಯರು ಒಪ್ಪಿ ಮಾಡಿದ ಮದುವೆಗೆ ತಾನೇಕೆ ಜವಾಬ್ದಾರಳಾಗಬೇಕೆಂದು ಮರು ಪ್ರಶ್ನಿಸಿದಳು. ಆಗ ಹಿಂದೂ ಸಮಾಜದಲ್ಲಿ ಬಾಲ್ಯವಿವಾಹ ಸಾಮಾನ್ಯವಾಗಿತ್ತು ಹಾಗೂ ಬಾಲಕಿಯ ಒಪ್ಪಿಗೆಯನ್ನು ಯಾರೂ ಪಡೆಯುತ್ತಿರಲಿಲ್ಲ. ಕೊನೆಗೆ ರುಕ್ಮಾಬಾಯಿಗೆ ಇಷ್ಟವಿಲ್ಲದ ಕಾರಣ ಗಂಡನ ಮನೆಗೆ ಹೋಗಬೇಕಾಗಿಲ್ಲವೆಂದು ತೀರ್ಪು ನೀಡಲಾಯಿತು. ದಾದಾಜಿ ಅಲ್ಲಿಗೇ ನಿಲ್ಲದೇ ಮೇಲ್ಮನವಿ ಸಲ್ಲಿಸಿದ. ಕೇಸು ಮುಂದುವರೆಯುತ್ತ ಕಾಯ್ದೆಯ ದ್ವಂದ್ವಗಳನ್ನೂ, ದುರ್ಬಲ ಅಂಶಗಳನ್ನೂ ಬಯಲುಗೊಳಿಸಿತು.

ಈ ಕಾಯ್ದೆಯು ಒಪ್ಪಿಗೆ ಪಡೆದು ಮದುವೆಯಾಗುವ ಪಾಶ್ಚಾತ್ಯ ಸಮಾಜಕ್ಕೆ ಅನ್ವಯವಾಗುವಂತೆ ಭಾರತಕ್ಕೆ ಹೊಂದಿಕೊಳ್ಳುತ್ತಿರಲಿಲ್ಲ. ಭಾರತದ ಬಹುಪಾಲು ಮದುವೆಗಳು ಬಾಲ್ಯವಿವಾಹಗಳೇ ಆಗಿದ್ದವು. ಲಾರ್ಡ್ ಮೆಕಾಲೆ ಭಾರತೀಯ ದಂಡ ಸಂಹಿತೆಯನ್ನು ರೂಪಿಸುತ್ತಾ ಒಪ್ಪಿಗೆಯ ವಯೋಮಿತಿ ಕನಿಷ್ಠ 15–16 ವರ್ಷ ಎಂದು ಹೇಳಿದಾಗ ಭಾರತದ ಎಲ್ಲ ಮದುವೆಗಳೂ ಕಾನೂನಿನ ಪ್ರಕಾರ ಅಸಿಂಧುವಾಗುವ ಅಪಾಯ ಒದಗಿತು. ಎಂದರೆ ಭಾರತ ಸಮಾಜದಲ್ಲಿ ಒಪ್ಪಿಗೆ–ಬಾಲ್ಯವಿವಾಹ ಎರಡೂ ಒಟ್ಟಿಗೆ ಹೋಗಲು ಸಾಧ್ಯವೇ ಇರಲಿಲ್ಲ.

ರುಕ್ಮಾಬಾಯಿಯ ಕೇಸಿನಲ್ಲಿ ಮೇಲಿನ ಕೋರ್ಟು ಗಂಡನ ಮನೆಗೆ ಹೋಗಲೊಪ್ಪದ ಅವಳಿಗೆ ಜೈಲುಶಿಕ್ಷೆ ವಿಧಿಸಿತು. ಆದರೆ ಅವಳು ದಾದಾಜಿಗೆ 2000 ರೂಪಾಯಿ ಕೊಟ್ಟು ಸ್ವಾತಂತ್ರ್ಯವನ್ನು 'ಗಳಿಸಿ'ದಳು. ಇದು ಸಂಪ್ರದಾಯವಾದಿಗಳಿಗೆ ಗೆಲುವಿನಂತೆಯೂ, ಬಾಲ್ಯವಿವಾಹವನ್ನು ವಿರೋಧಿಸುತ್ತಿದ್ದವರಿಗೆ ಹಿನ್ನಡೆಯಾಗಿ ತೋರಿತು. ಭಾರತದ ಸಾಮಾಜಿಕ ಅನಿಷ್ಟಗಳ ಕುರಿತು, ವಿಶೇಷವಾಗಿ ಬಾಲ್ಯವಿವಾಹದ ವಿರುದ್ಧವಾಗಿ ಹೋರಾಡುತ್ತಿದ್ದ ಬೆಹ್ರಾಮ್ಜಿ ಮಲಬಾರಿ ಅವರು ಇದನ್ನೊಂದು ಸೋಲೆಂಬಂತೆ ಪರಿಗಣಿಸಿದರು. ಬಾಲ್ಯವಿವಾಹ ರದ್ದತಿಗಷ್ಟೇ ಅಲ್ಲದೇ, ಒಪ್ಪಿಗೆ ವಯಸ್ಸನ್ನು ಕಾಯ್ದೆ ಮೂಲಕ ಹೆಚ್ಚಿಸಬೇಕೆಂದು ಮಲಬಾರಿ, ಪಂಡಿತ ರಮಾಬಾಯಿ, ಆನಂದಿಬಾಯಿ ಸಮೇತ ಹಲವರು ಒತ್ತಾಯ ತಂದರು. 1891ರಲ್ಲಿ 'ಒಪ್ಪಿಗೆ ವಯಸ್ಸು ಕಾಯ್ದೆ' ಜಾರಿಯಾಯಿತು. ಅದನ್ನು ಭಾರತೀಯ ಸಂಸ್ಕೃತಿಯ ಮೇಲಿನ ವಸಾಹತುಶಾಹಿ ದಬ್ಬಾಳಿಕೆ ಎಂದು ಬಾಲಗಂಗಾಧರ ತಿಲಕರೂ ಸೇರಿದಂತೆ ಮುಖ್ಯವಾಹಿನಿಯ ಹಲವು ನಾಯಕರು ವಿರೋಧಿಸಿದರು.

ನಿಜವಾಗಿ ಒಪ್ಪಿಗೆ ವಯಸ್ಸಿನ ಚರ್ಚೆ ಶುರುವಾಗಿದ್ದು 1889ರಲ್ಲಿ 11 ವರ್ಷದ ಫೂಲಮ್ಮಿ ಎಂಬ ವಿವಾಹಿತ ಬಂಗಾಳಿ ಹುಡುಗಿ, 35 ವರ್ಷದ ತನ್ನ ಗಂಡ ಹರಿಮೋಹನ ಮೈತಿಯ ಜೊತೆ ದೈಹಿಕ ಸಂಪರ್ಕದ ಸಮಯದಲ್ಲಿ ತೀವ್ರ ರಕ್ತಸ್ರಾವವಾಗಿ ತೀರಿಕೊಂಡಾಗ.



ಎಳೆಯ ಹುಡುಗಿಯ ದಾರುಣ ಸಾವು ಒಪ್ಪಿಗೆ ವಯಸ್ಸನ್ನು 10ರಿಂದ 12ಕ್ಕೇರಿಸುವಂತೆ ಮಾಡಿತು. ಎಂದರೆ 12 ವರ್ಷದ ಒಳಗೆ ಗಂಡನೇ ಆದರೂ ಹುಡುಗಿಯ ಜೊತೆ ಲೈಂಗಿಕ ಸಂಪರ್ಕ ಹೊಂದಿದಲ್ಲಿ ಅದು ಅತ್ಯಾಚಾರ ಎಂದು ಪರಿಗಣಿತವಾಯಿತು. ಇದಾದ ನಂತರ ಒಪ್ಪಿಗೆ ವಯಸ್ಸಿನ ಮೊದಲೇ 'ಓಡಿಹೋದ' ಜೋಡಿಗಳಲ್ಲಿ ಗಂಡನ್ನು 'ಅಪಹರಣ'ದ ತಪ್ಪಿಗೆ ಶಿಕ್ಷೆಗೊಳಪಡಿಸಿದರೆ, ಓಡಿಹೋದ ಹುಡುಗಿಗೆ ಅಪಹರಣಕ್ಕೆ ಕುಮ್ಮಕ್ಕು ಕೊಟ್ಟಳೆಂಬ ಕಾರಣಕ್ಕೆ ಶಿಕ್ಷಿಸುವುದು ಮುಂದುವರೆಯಿತು.

ಅಂದಿನ ಸಾಮಾಜಿಕ ಸುಧಾರಣಾಕಾರರು ಮಹಿಳೆಯರು ಸಮಾಜ ಕಟ್ಟುವಲ್ಲಿ ಸಕ್ರಿಯವಾಗಿ ಭಾಗವಹಿಸಬೇಕೆಂದು ಬಯಸಿ ಶಿಕ್ಷಣ, ವಿಧವಾ ಪದ್ಧತಿ ರದ್ದತಿ ಇತ್ಯಾದಿಗಳ ಸಲುವಾಗಿ ಶ್ರಮಿಸಿದರೂ, ಸ್ವಾತಂತ್ರ್ಯಪೂರ್ವದಲ್ಲಿ ಜ್ಯೋತಿಬಾ ಫುಲೆ ಹಾಗೂ ಸ್ವಾತಂತ್ರ್ಯಾನಂತರ ಅಂಬೇಡ್ಕರರನ್ನು ಹೊರತುಪಡಿಸಿ ಮಹಿಳಾ ಚಳವಳಿ ಜಾತಿ ಪ್ರಶ್ನೆಯನ್ನು ದೂರವೇ ಇಟ್ಟಿತು. ಆದರೆ ಜಾತಿಪದ್ಧತಿಯೆನ್ನುವುದು ಅಖಂಡ ವ್ಯವಸ್ಥೆ. ಹೀಗಾಗಿ ವ್ಯಕ್ತಿಗತ ಸುಧಾರಣೆಗಾಗಿ ಕಾನೂನು ಬಂದರೂ ಒಳವಿವಾಹ, ಜಾತಿ ಆಚರಣೆಗಳು ಮುಂದುವರೆದಂತೆ ವರದಕ್ಷಿಣೆ, ಬಾಲ್ಯವಿವಾಹಗಳೂ ವ್ಯವಸ್ಥೆಯ ಇನ್ನೊಂದು ಭಾಗವಾಗಿ ಮುಂದುವರೆದವು.

ಈ ಒಪ್ಪಿಗೆ ವಯಸ್ಸಿನ ವಿವಾದ ಇಂದಿಗೂ ನಿಂತಿಲ್ಲ. 'ಪೆನೆಟ್ರೇಟಿವ್' ಅಲ್ಲದ ಲೈಂಗಿಕ ಸಂಪರ್ಕಕ್ಕೆ ಒಪ್ಪಿಗೆ ವಯಸ್ಸು 12 ವರ್ಷ (ವಿವಾಹದ ಹೊರತಾಗಿ) ಎಂದು ನಿಗದಿ ಮಾಡಿದ ಕಾಯ್ದೆಯೊಂದು ಇದೇ ವರ್ಷದ ಫೆಬ್ರುವರಿ ತಿಂಗಳಿನಲ್ಲಿ ಸಂಸತ್ತಿನ ಮುಂದೆ ಚರ್ಚೆಗೆ ಬಂದಾಗ ತೀವ್ರ ವಿವಾದಗಳೆದ್ದಿದ್ದನ್ನು ಇಲ್ಲಿ ನೆನೆಯಬಹುದು. ಈಗಲೂ ವ್ಯಾಟಿಕನ್‌ನಗರದಲ್ಲಿ ಒಪ್ಪಿಗೆ ವಯಸ್ಸು 12 ಅಂತೆ! ಇದು ಸ್ಪೇನ್‌ನಲ್ಲಿ 13, ಅಮೆರಿಕದಲ್ಲಿ 16, ಮಡಗಾಸ್ಕರ್‌ನಲ್ಲಿ 20 ವರ್ಷ! ಬಹುಪಾಲು ಇಸ್ಲಾಮಿಕ್ ದೇಶಗಳು ವಿವಾಹ ಬಾಹಿರ ಲೈಂಗಿಕತೆಗೆ ಅವಕಾಶವಿಲ್ಲ ವೆಂದು ಒಪ್ಪಿಗೆ ವಯಸ್ಸಿನ ಬಗ್ಗೆ ಮಾತಾಡುವುದಿಲ್ಲ. ಎಷ್ಟೇ ವಯಸ್ಸಾದರೂ ವಿವಾಹಕ್ಕೆ ಅನುಮತಿ ಸಿಕ್ಕರೆ ಲೈಂಗಿಕ ಸಂಪರ್ಕಕ್ಕೂ ಒಪ್ಪಿಗೆ ಸಿಕ್ಕಂತೆಯೇ ಎಂಬ ಧೋರಣೆ ಅದರ ಹಿಂದಿದೆ.

ಪ್ರಸ್ತುತ ಬಹುಪಾಲು ಕಾಯ್ದೆ ಕಾನೂನುಗಳು ಮಹಿಳಾಪರವಾಗಿಯೇ ಇದ್ದರೂ, ಸಮಾಜವು ವಿವಾಹದ ವಿಷಯದಲ್ಲಿ ಇನ್ನೂ ಉದಾರವಾಗಿ ಚಿಂತಿಸಬೇಕಾಗಿದೆ. ಇಲ್ಲವಾದಲ್ಲಿ ಸಾಂವಿಧಾನಿಕ ಪ್ರಯತ್ನಗಳೆಲ್ಲ ಕಾಗದದ ಹುಲಿಗಳಾಗಿಯೇ ಉಳಿಯುತ್ತವೆ. ಬಾಲ್ಯವಿವಾಹ ತಡೆಯಲು ಯತ್ನಿಸಿದ ರಾಜಸ್ಥಾನದ ಭನವಾರಿ ದೇವಿಯಂಥವರು ಸಾಮೂಹಿಕ ಅತ್ಯಾಚಾರದ 'ಶಿಕ್ಷೆ'ಗೆ ಗುರಿಯಾಗುತ್ತಲೇ ಇರುತ್ತಾರೆ. ❑




# ಲೈಂಗಿಕ ಅಲ್ಪಸಂಖ್ಯಾತತ್ವದ ಬದುಕು ಬಯಲ ಸಂಕಥನ

■ ಡಾ. ಬಿ.ಎನ್. ಸುಮಿತ್ರಾಬಾಯಿ

*'What is a woman?'*
*'Woman is not one'* *-Toril Moi*

'ಬದುಕು ಬಯಲು: ಹಿಜ್ರಾ ಒಬ್ಬಳ ಆತ್ಮಕತೆ'ಯನ್ನು ಓದಿದ ಮೇಲೆ ತೋರಿಲ್‌ಮೊಯಿ ಹೇಳಿರುವ ಮಾತಿನ ಅರ್ಥ ಇನ್ನಷ್ಟು ವಿಸ್ತರಿಸಿದಂತೆ ನನಗನ್ನಿಸಿತು. 'ಹೆಣ್ಣುತನ' ಎನ್ನುವುದಕ್ಕೆ ಜೀವಶಾಸ್ತ್ರೀಯವಾದ (ಸಂತಾನೋತ್ಪಾದಕತೆಯ ಉದ್ದೇಶದ) ಅರ್ಥವನ್ನು ಬಿಟ್ಟರೆ, ಅದರ ಆಚೆಗಿನ ಎಲ್ಲಾ ನಿರ್ವಚನಗಳಿಗೂ ಸಂಸ್ಕೃತಿಯ ಲೇಪವಿದ್ದೇ ಇರುತ್ತದೆ. ಜೆಂಡರ್ ಹೀಗೆ ಬಹುರೂಪದ್ದು. ಆದರೆ ಪಿತೃಸಂಸ್ಕೃತಿಯ ನಿರ್ದೇಶ, ನಿರೀಕ್ಷೆ ಮತ್ತು ಅದು ಒಪ್ಪಿರುವ ಮಾನದಂಡಗಳ ಕವಚದೊಳಗೆ ತೂರಿಸಿಬಿಡಬಹುದಾದ ರೀತಿಯ 'ಹೆಣ್ತನ' ಎಂಬುದು ಮಾನವವ್ಯಕ್ತಿಗಳಾದ ಮಹಿಳೆಯರಲ್ಲಿ ಇದ್ದೇ ಇರಬೇಕು. ಹಾಗೆ ಇರುತ್ತದೆ ಎನ್ನುವುದು ಪೂರ್ಣನಿಜವಲ್ಲ. ಇದೇ ರೀತಿ 'ಗಂಡುತನ' ಎನ್ನುವುದೂ ನಿಸ್ಸಂದಿಗ್ಧ ಸ್ಥಿತಿಯಲ್ಲ. ಸ್ತ್ರೀ–ಪುರುಷರನ್ನು ಎರಡು ತೀರಾ ಭಿನ್ನ ಗುಂಪುಗಳೆಂದು ವಿಭಜಿಸಿ, ಇವರಲ್ಲಿ ಅನ್ಯಲಿಂಗ ಸಂಬಂಧವನ್ನು ಮಾತ್ರವೇ 'ಸಹಜ'ವೆಂದು ಮಾನ್ಯ ಮಾಡಿರುವ ಪಿತೃಪ್ರಧಾನ ವ್ಯವಸ್ಥೆ ಆ ಚೌಕಟ್ಟಿಗೆ ಹೊಂದಲಾರದ ಸಲಿಂಗಿಗಳು, ಲಿಂಗಾಂತರಿಗಳು, ಪರಿವರ್ತಿತಲಿಂಗಿಗಳು, ಲೆಸ್ಬಿಯನ್ನರು, ಹಿಜಡಾಗಳೇ ಮುಂತಾದ ಲೈಂಗಿಕ ಅಲ್ಪಸಂಖ್ಯಾತರೆಲ್ಲರನ್ನೂ ಅವಹೇಳನ, ಶೋಷಣೆ, ತಿರಸ್ಕಾರ. ದಮನಗಳಿಗೆ ಬಲಿಯಾಗಿಸಿ ಅವರನ್ನು ಬೃಹತ್ ಸಮಾಜದ ಅಂಚಿಗೆ ಒತ್ತರಿಸಿರುತ್ತದೆ. ಅಧಿಕಾರದಿಂದ ದೂರವಾದ ಇಂಥ ಸೀಮಾಂತದ ಜಾಗದಲ್ಲಿ ಬದುಕುತ್ತಿರುವ 'ಹಿಜಡಾ' ಸಮುದಾಯದವರ ಬದುಕಿನ ಬವಣೆಗಳನ್ನು ಸ್ವಾನುಭವದ ಮೂಲಕ ವಿಸ್ತಾರವಾಗಿ ಚಿತ್ರಿಸಿರುವ ಈ ಕೃತಿ ಲೇಖಕಿಯೇ ಹೇಳಿರುವಂತೆ 'ಇದು ಒಬ್ಬ ರೇವತಿಯ ಕತೆಯಲ್ಲ. ಹಲವಾರು ರೇವತಿಯರ ಕತೆ.'

ರೇವತಿಯ ಈ ಆತ್ಮಕಥೆ ನಿಸ್ಸಂಕೋಚದ, ಯಾವುದೇ ಹಿಂಜರಿಕೆಯಿಲ್ಲದ, ಅತ್ಯಂತ ನೇರವೂ, ದಿಟ್ಟತನದ್ದೂ ಆದ ರೀತಿಯಲ್ಲಿ ವಾಸ್ತವಾನುಭವಗಳನ್ನು ಮನಮಿಡಿಯುವಂತೆ ಚಿತ್ರಿಸುತ್ತದೆ. ಹತ್ತುವರ್ಷದ ಬಾಲಕ ದೊರೈಸ್ವಾಮಿ, ತಮಿಳುನಾಡಿನ ಸೇಲಂ ಜಿಲ್ಲೆಯ ನಾಮಕ್ಕಳ್ ಎಂಬ ಹಳ್ಳಿಯ ಸಾಮಾನ್ಯ ಲಾರಿ ಡ್ರೈವರ್ ಒಬ್ಬರ ಕುಟುಂಬದಲ್ಲಿ ಕೊನೆಯ ಮಗನಾಗಿ ಜನಿಸಿದವನು. ಆದರೆ ಆ ವಯಸ್ಸಿಗಾಗಲೇ ತಾನು ಇತರ ಹುಡುಗರಿಗಿಂತ 'ಭಿನ್ನ' ಎನ್ನುವ ತೀವ್ರ ಅರಿವಿನಿಂದ ಅವನ ಬಾಲ್ಯವೆಲ್ಲ ಬಲವಾದ ಆತಂಕ, ಅನಿಷ್ಟ, ಸಂದಿಗ್ಧತೆಯಿಂದ ತುಂಬಿಹೋಗಿರುತ್ತದೆ. ಆ ದೇಹವೇ ತನ್ನದಲ್ಲ, ತಾನಾರೋ ಬೇರೆಯೇ ಎನ್ನುವ ಕಸಿವಿಸಿಯಲ್ಲಿ ಹುಡುಗಿಯಂತೆ ವೇಷ ತೊಡುವ, ಹುಡುಗಿಯರೊಡನೆ ಆಟವಾಡುವ, ಅವರಂತೆ ವರ್ತಿಸುವ ಎಡಬಿಡಂಗಿತನದಲ್ಲಿ ಶಾಲೆಯಲ್ಲಿ ಜೊತೆಯ ಹುಡುಗರ ಗೇಲಿ, ತಿರಸ್ಕಾರ, ಕೀಟಲೆ, ಹಿಂಸೆಗಳಿಂದ ವಿದ್ಯಾಭ್ಯಾಸ ಕುಂಠಿತವಾದರೆ, ಮನೆಯ ಜನರೂ ಇವನ ಪರಿಸ್ಥಿತಿಯನ್ನು ಸಹಾನುಭೂತಿಯಿಂದ ಅರ್ಥಮಾಡಿಕೊಳ್ಳದೆ 'ಗಂಡಸಿನಂತೆ' ಉಳಿಸಿಡಲು ಬೈಗುಳ, ದಂಡನೆಗಳನ್ನು ಬಳಸ ತೊಡಗುತ್ತಾರೆ. ಇಂಥ ದಿಕ್ಕುತಪ್ಪಿದ ಹುಡುಗನಿಗೆ ಪೊಟ್ಟೈಗಳ ಸಹವಾಸ ಬೆಳೆದು ಮನೆಬಿಟ್ಟು ಓಡಿಹೋಗಿ ದೆಹಲಿಯಲ್ಲಿ ಹಿಜಡಾ ವಸತಿಯನ್ನು ತಲುಪುತ್ತಾನೆ. ಅಲ್ಲಿ ಗುರುವಿಗೆ ಚೇಲಾ ಆಗಿ, ರೇವತಿ ಎಂಬ ಸ್ತ್ರೀನಾಮವನ್ನು ಗಳಿಸಿಕೊಂಡ ಬಗೆಯನ್ನು ರೇವತಿ ವಿವರವಾಗಿ ಬಣ್ಣಿಸುತ್ತಾರೆ.

*ಗಂಡಾಗಿ ಹುಟ್ಟಿದರೂ ಭಾವನೆಯಲ್ಲಿ ಸ್ವಭಾವದಲ್ಲಿ ತಾವು ಹೆಣ್ಣೆಂದು ಗುರುತಿಸಿಕೊಳ್ಳುವ, ಹೆಣ್ಣಾಗಿಯೇ ಬದುಕಲು ಶಿಶ್ನಚ್ಛೇದಕ್ಕೂ ಒಳಗಾಗುವ ಲೈಂಗಿಕ ಅಲ್ಪಸಂಖ್ಯಾತ ಸಮುದಾಯ ಹಿಜಡಾಗಳದು (ಹಿಂದೂಸ್ತಾನಿ ಭಾಷೆಯ ಎಲ್ಲಾ 'ಡ' ಕಾರಗಳೂ ಬ್ರಿಟಿಷರ ನಾಲಿಗೆಗಳಲ್ಲಿ 'ರ' ಕಾರಗಳಾದವು. ಅದನ್ನೇ ಇಂಗ್ಲಿಷ್‌ಮಂದಿ ಇಂದಿಗೂ ಸರಿ ಎಂದು ತಿಳಿಯುತ್ತಾರೆ. ಹಾಗಾಗಿ ಎ. ರೇವತಿಯವರು ತಮಿಳಿನಲ್ಲಿ ರಚಿಸಿದ ಅವರ ಆತ್ಮಕಥನವನ್ನು ಇಂಗ್ಲಿಷ್‌ಗೆ ಅನುವಾದಿಸಿದ ವಿ. ಗೀತಾ ಅವರು* The truth about me: a Hijra life Story *ಎಂದು ಶೀರ್ಷಿಕೆ ನೀಡಿರುತ್ತಾರೆ. ಮತ್ತು ಕನ್ನಡಕ್ಕೆ ಈ ಇಂಗ್ಲಿಷ್ ಕೃತಿಯನ್ನು ಅನುವಾದಿಸಿರುವ ಲೇಖಕಿ ದು. ಸರಸ್ವತಿ 'ಬದುಕು ಬಯಲು: ಹಿಜ್ರಾ ಒಬ್ಬಳ ಆತ್ಮಕತೆ' ಎಂದು ಕರೆದಿದ್ದಾರೆ. ರೇವತಿಯ ಕಥನ ಅತ್ಯಂತ ನೇರ, ಕಠೋರ ವಾಸ್ತವಗಳ ನಿರ್ಭೀತ ಅಭಿವ್ಯಕ್ತಿ, ದು. ಸರಸ್ವತಿಯವರು ಅಷ್ಟೇ ಸೊಗಸಾಗಿ, ತಿಳಿಯಾಗಿ ಭಾವಾರ್ದ್ರವಾಗುವಂತೆ ಅದನ್ನು ತಮ್ಮದೇ ವಿಶಿಷ್ಟ ಶೈಲಿಯಲ್ಲಿ ಕನ್ನಡಿಗರಿಗೆ ಒದಗಿಸಿದ್ದಾರೆ. ಪತ್ರಕರ್ತೆ, ಪ್ರಕಾಶಕಿ ಗೌರಿ ಲಂಕೇಶ್ ಈ ಕನ್ನಡ ಆವೃತ್ತಿಯನ್ನು ಬೆಳಕಿಗೆ ತಂದಿದ್ದಾರೆ.*

ಒಬ್ಬ ಹಿಜಡಾಗೆ ಸಮಾಜದಿಂದಲೂ ಬಂಧುಬಾಂಧವರಿಂದಲೂ ಗೌರವ ಪಡೆಯುವುದು ಅತ್ಯಂತ ಕಠಿಣ. ಅಂಥ ಗೌರವವನ್ನು ಒಂದು 'ನಿಧಿ' ಎನ್ನುವ ಹಾಗೆ ಆಕೆಯ ಹೃದಯ ಹಂಬಲಿಸುತ್ತದೆ. ರೇವತಿ ಒಂದೆಡೆ ಹೇಳುತ್ತಾರೆ: "ಒಬ್ಬ ಪೊಟ್ಟೈ ಆಗಿ ಹುಟ್ಟಿದ್ದು, ಪೊಟ್ಟೈಗಳೊಂದಿಗೆ ಬದುಕು ಮಾಡಬೇಕಿದ್ದಾಗ ತನ್ನ ಕಿವಿ, ಮೂಗುಗಳನ್ನು ಚುಚ್ಚಿಸಿಕೊಂಡು, ಉದ್ದಕೂದಲು ಬೆಳೆಸಿಕೊಳ್ಳಬೇಕಾದದ್ದು ಅತ್ಯಂತ ಅವಶ್ಯಕ. ನೀವು ಬರೀ ಒತ್ತುಗುಂಡಿಯ ರೀತಿಯ ಓಲೆ ಮತ್ತು ವಿಗ್‌ಧರಿಸಿದರೆ, ಯಾರೊಬ್ಬರೂ ನಿಮಗೆ ಗೌರವ ನೀಡುವುದಿಲ್ಲ" ಇದು ರೇವತಿಯ ಗುರು, ರೇವತಿಯಂಥ ತನ್ನ ಚೇಲಾಗಳಿಗೂ ಹೇಳುವ ಉಪದೇಶ. 'ಹೆಣ್ತನ' ತೋರಿಕೆಯದಾಗದೆ, ಕೃತಕತೆಯಿಂದ ಕೂಡಿರದೆ, ನೈಜವಾದದ್ದಾಗಿದೆ ಎಂದು ತನ್ನೊಳಗೆ ಕಂಡು, ಭಾವಿಸಿ, ಅಭಿವ್ಯಕ್ತಿಗೊಳಿಸುವುದರ ಅವಶ್ಯಕತೆಯನ್ನು ಬಹುಶಃ ಆ ನುಡಿಗಳು ಸೂಚಿಸುತ್ತವೆ. ಆದರೆ ದೊಡ್ಡ ವಿಡಂಬನೆ ಎಂದರೆ ಈ ಎಲ್ಲ ನಿಯಮಗಳನ್ನೂ ಮುಗ್ಧ ಶ್ರದ್ಧೆಯಿಂದ ಪಾಲಿಸಿದರೂ ರೇವತಿಯನ್ನು ಜನರು ಅಗೌರವ ತಿರಸ್ಕಾರಗಳಿಂದ ಕಾಣುವುದನ್ನು ಅದು ತಪ್ಪಿಸಲಿಲ್ಲ. ತನ್ನ ಗುರು ಉಪದೇಶಿಸಿದ ಎಲ್ಲಾ "ಹಿಜಡಾ ಕಾನೂನು"ಗಳನ್ನು ಆಕೆ ತಪ್ಪದೆ ಪಾಲಿಸಿಯೂ ಅತ್ಯಾಚಾರ, ವೇಶ್ಯಾತನ, ಗಿರಾಕಿಗಳಿಂದ ಒದಗುವ ಕ್ರೂರ ಹಿಂಸೆ, ಪೊಲೀಸರ ಕೈಯಲ್ಲಿ ಸಿಕ್ಕಿದಾಗಿನ ನರಕ ಸದೃಶ ಚಿತ್ರಹಿಂಸೆಗಳ ನಿರಂತರ ನರಳಾಟದಲ್ಲೆ ಆಕೆ ತನ್ನ ಬದುಕಿನ 20 ವರ್ಷಗಳಷ್ಟು ದೀರ್ಘ ಅವಧಿಯನ್ನು ಕಳೆದರು.

ದೆಹಲಿಯಲ್ಲಿದ್ದಾಗ ಮನೆಯವರ ಬಗೆಗಿನ ಸೆಳೆತ ಆಕೆಯನ್ನು ತನ್ನೂರಿಗೆ, ತನ್ನ ಮನೆಗೆ ಎಳೆದುತಂದಿತು. ಆದರೆ ಮನೆಯವರಲ್ಲಿ ಅವರ ಅಕ್ಕನೊಬ್ಬರನ್ನು ಬಿಟ್ಟರೆ ಅಪ್ಪ, ಅಮ್ಮ ಕೂಡ ಹೆಣ್ಣಿನ ವೇಷತೊಟ್ಟ ರೇವತಿಯನ್ನು ಒಪ್ಪಲು ಸಿದ್ಧರಾಗುವುದಿಲ್ಲ. ತದ್ವಿರುದ್ಧವಾಗಿ ಅವಳ ಅಣ್ಣಂದಿರು ಆಕೆಯ ತಲೆ ಬೋಳಿಸಿ, ದೊರೈಸ್ವಾಮಿಯೇ ಆಗಿರುವಂತೆ ಹೊಡೆದು ಬಡಿದು ಆಗ್ರಹಿಸುವ ದೈಹಿಕ-ಮಾನಸಿಕ ಯಾತನೆಗೆ ಆಕೆ ತುತ್ತಾಗುತ್ತಾಳೆ. ಹೀಗಾಗಿ ಪುನಃ ದೆಹಲಿಗೆ, ಅಲ್ಲಿಂದ ಮುಂಬೈಗೆ ಸ್ಥಾನಾಂತರಗೊಂಡು, ದಿಂಡಗಲ್‌ನ ಆಸ್ಪತ್ರೆಯೊಂದರಲ್ಲಿ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡು ಲಿಂಗಪರಿವರ್ತನೆ ಹೊಂದಿ ಇನ್ನೀಗ ತಾನು ಪೂರ್ಣ ಹೆಣ್ಣಾದೆ ಎಂಬ ಧನ್ಯತೆಯಲ್ಲಿ ರೇವತಿ ಮುಂಬೈಯಲ್ಲಿ ನೆಲೆಸುತ್ತಾರೆ. ಅಲ್ಲಿ ತನ್ನ ಹೆಣ್ತನದ ಫಲವಾದ ದೇಹದ ಬಯಕೆಯ ಪೂರೈಕೆಗೆ ಲೈಂಗಿಕ ಕಾರ್ಯಕರ್ತೆಯಾಗುವುದು ಆಕೆಗೆ ಅನಿವಾರ್ಯವಾಗುತ್ತದೆ. ಶಿಶ್ನವನ್ನು ತೆಗೆಯಿಸುವ ಪ್ರಕ್ರಿಯೆಯ ಬಗ್ಗೆ ರೇವತಿ ಒಂದು ಕಡೆ ಹೀಗೆ ಹೇಳುತ್ತಾರೆ:

> **"ನಿಮ್ಮ ಕೈಯಲ್ಲಿ ಆರು ಬೆರಳುಗಳಿದ್ದರೆ, ಆ ಆರನೆಯ ಬೆರಳನ್ನು ನೀವು ಶಸ್ತ್ರಚಿಕಿತ್ಸೆ ಮಾಡಿಸಿ ತೆಗೆಸಿದರೆ ಹೇಗೋ ಹಾಗೆ ನಮಗೆ ಅದು"**

ಆದರೆ ಆ ಶಸ್ತ್ರಚಿಕಿತ್ಸೆ ಕಾನೂನು ಬದ್ಧವಲ್ಲದ, ಅನೈತಿಕ ವಿಧಾನಗಳಿಂದ ಜರುಗುವುದು ಎಷ್ಟು ಭಯಂಕರ, ಯಾತನಾದಾಯಕ ಅನುಭವ ಎನ್ನುವುದನ್ನು ರೇವತಿ ಮಾತ್ರವಲ್ಲ, ಇವರಿಗಿಂತ ಮೊದಲು ತಮ್ಮ ಆತ್ಮಕಥೆಗಳಲ್ಲಿ ನಳಿಸಿ (ನಾನ್ ಸರವಣನ್ ಅಲ್ಲ) ಮತ್ತು ವಿದ್ಯಾ (ನಾನು ಅವನಲ್ಲ, ಅವಳು) ಮುಂತಾದ ಪರಿವರ್ತಿತ ಲಿಂಗಿಗಳೆಲ್ಲರ ಅನುಭವವೂ ಸಾರಿ ಹೇಳುತ್ತದೆ. ಅದೊಂದು ನರಕ ಹೊಕ್ಕು ಬದುಕಿ ಬಂದಂಥ ಸ್ಥಿತಿ.

ಹಿಜಡಾಗಳ ಬಗ್ಗೆ ಸಮಾಜದಲ್ಲಿ ಜನರಲ್ಲಿ ಚಿತ್ರವಿಚಿತ್ರ ಊಹೆಗಳೂ ಭೀತಿಗಳೂ ರೂಢಿಸಿರುವುದರ ಬಗ್ಗೆ ರೇವತಿಗೆ ಚೆನ್ನಾಗಿ ಅರಿವಿದೆ. ಅವರ ಮೊಟ್ಟಮೊದಲ ಕೃತಿ 'ಉರವುಂ ಉಣರ್ವುಂ' ಎಂಬುದು ತಮಿಳುನಾಡು ಮತ್ತು ಕರ್ನಾಟಕದಲ್ಲಿ ನೆಲೆಸಿರುವ 50 ಜನ ಹಿಜಡಾಗಳ ಜೀವನಾನುಭವಗಳ ಕಥನಗಳ ಸಂಗ್ರಹ. ಈ ಪುಸ್ತಕಕ್ಕಾಗಿ ಆಕೆ ಹಿಜಡಾಗಳ ಸಂದರ್ಶನ ಮಾಡುವಾಗ ಆ ಸಮುದಾಯದವರ ಆತಂಕಗಳನ್ನೂ ದಾಖಲಿಸುತ್ತಾರೆ. 'ಈ ಪ್ರಶ್ನೆಗಳನ್ನು ಯಾಕೆ ಕೇಳ್ತಿದೀಯಾ?' 'ಈ ಕೆಲಸಕ್ಕೆ ನಿನಗೆ ದುಡ್ಡು ಕೊಡ್ತಾರಾ?' ಎನ್ನುವುದರಿಂದ ಹಿಡಿದು ತಮ್ಮನ್ನು ಎಂದೂ ಅರ್ಥ ಮಾಡಿಕೊಳ್ಳಲಾರದ ಈ ಸಮಾಜದ ಸಾರ್ವಜನಿಕರ ಎದುರಲ್ಲಿ ತಮ್ಮ ಬದುಕಿನ ರಹಸ್ಯವನ್ನೆಲ್ಲಾ ಯಾಕೆ ಹೇಳಬೇಕು? ಎಂಬ ವಿರೋಧಭಾವದವರೆಗೂ ಅವರ ಭಾವನೆಗಳಿದ್ದುದನ್ನು ರೇವತಿ ವಿವರಿಸುತ್ತಾರೆ. ಇದರ ಇನ್ನೊಂದು ಮಗ್ಗುಲಲ್ಲಿ ಸಾರ್ವಜನಿಕ ಜನಾಭಿಪ್ರಾಯ ಹಿಜಡಾಗಳ ಬಗ್ಗೆ ಹೇಗಿರುತ್ತದೆ ಎನ್ನುವುದನ್ನೂ ರೇವತಿ ಗುರುತಿಸುತ್ತಾರೆ.

**"ಜನರು ನಮ್ಮ ಬಗ್ಗೆ ಕೆಟ್ಟ ರೀತಿಯಲ್ಲಿ ಯೋಚಿಸುತ್ತಾರೆ. ನಾವು ಅವರ ಮಕ್ಕಳನ್ನು ಕದ್ದುಕೊಂಡು ಹೋಗಿ ನಪುಂಸಕರನ್ನಾಗಿ ಮಾಡಿಬಿಡುತ್ತೇವೆಂದು ಅವರು ಅಂದುಕೊಳ್ಳುತ್ತಾರೆ. ನಮಗೆ ಅವರು ದುಡ್ಡು ಕೊಡದೆ ಹೋದರೆ ನಮ್ಮ ಬಟ್ಟೆ ಎತ್ತಿ ತೋರಿಸಿಬಿಡುತ್ತೇವೆಂದು ಹೆದರುತ್ತಾರೆ. ನಾವು ಎಲ್ಲರೂ ವೇಶ್ಯಾಗಾರಿಕೆ ಮಾಡುತ್ತೇವೆಂದೂ ತಿಳಿದುಕೊಂಡಿರುತ್ತಾರೆ. ಅಂಥವರಿಗೆ ನಮ್ಮನ್ನು ನಿಜವಾಗಿ ಹೇಗೆ ನಡೆಸಿಕೊಳ್ಳಲಾಗುತ್ತದೆ ಎಂಬುದನ್ನೂ, ನಾವೂ ಮನುಷ್ಯರು ಎನ್ನುವುದನ್ನೂ, ನಿಮ್ಮಂತೆಯೇ ನಮಗೂ ಆಸೆ, ಬಯಕೆಗಳಿವೆ ಎಂಬುದನ್ನೂ ತೋರಿಸಲು ಬಯಸಿರುವುದಾಗಿ"** ರೇವತಿ ಹೇಳುತ್ತಾರೆ. ಈ ರೀತಿ ಹಿಜಡಾತನ, ಹಿಜಡಾ ಸಮುದಾಯ, ಅವರದೇ ಜೀವನ ವಿಧಾನ, ಅವರ 'ಸಂಸ್ಕೃತಿ' ಕೂಡ ಈ ಕೃತಿಯಲ್ಲಿ ನಿರಚನಗೊಳ್ಳುತ್ತದೆ.

ತಮಿಳುನಾಡಿನ ಹಳ್ಳಿ ಹುಡುಗನೊಬ್ಬ ದೆಹಲಿಗೆ, ಅಲ್ಲಿಂದ ಮುಂಬೈಗೆ ಓಡಿಹೋಗಿ, ಜಾಗದಿಂದ ಜಾಗಕ್ಕೆ ತಿರುಗಾಡುತ್ತಾ ಹಿಜಡಾ ಆಗಿ ತನ್ನ ಮಾನವೀಯ ಘನತೆ, ಗೌರವಕ್ಕಾಗಿ ಪರಿತಪಿಸುವ, ಅವುಗಳಿಗಾಗಿ ನಿರಂತರವಾಗಿ ಹುಡುಕುವ ಈ ದೀರ್ಘಪಯಣದ ಹಾದಿಯಲ್ಲಿ ರೇವತಿ ಬೆಂಗಳೂರಿಗೆ ಬಂದು ಲೈಂಗಿಕ ಕಾರ್ಯಕರ್ತೆಯಾಗಿ ದುಡಿಯಲು ತೊಡಗಿದ ಬಳಿಕ ಒಂದು ಬದಲಾವಣೆಯ ತಿರುವು ಒದಗುತ್ತದೆ. ಅವರನ್ನು ಗುರುವಾಗಿ ಸ್ವೀಕರಿಸಿದ ಯುವಜನರು ನಗರದಲ್ಲೇ ಹುಟ್ಟಿ ಬೆಳೆದು ಶಿಕ್ಷಣ ಪಡೆದಿದ್ದ ಬುದ್ಧಿಜೀವಿಗಳಂಥವರು. ಅವರು ರೇವತಿಯವರನ್ನು ಲೈಂಗಿಕ ಅಲ್ಪಸಂಖ್ಯಾತರ, ದಲಿತರ ಮತ್ತು


ಲಿವಿಂಗ್ ಸ್ಮೈಲ್ ವಿದ್ಯಾ



*ಹಿಜಡಾಗಳಿಗೆ ತಾವೇ ಕಡೆದು ರೂಪಿಸಿಕೊಂಡ ಸ್ಪಷ್ಟವಾದ ಜೀವನಕ್ರಮವಿದೆ. ಸಮಾಜದ ಅತ್ಯಂತ ತುದಿಯಲ್ಲಿ ಬದುಕುತ್ತಿರುವ ಅವರಿಗೆ ತಮ್ಮನ್ನು ತಾವೇ ಒಂದು 'ಕುಟುಂಬ'ದಂಥ ಘಟಕಗಳಲ್ಲಿ, ಕುಲಗಳಲ್ಲಿ ಸಂಘಟಿಸಿಕೊಳ್ಳುವುದು ಅನಿವಾರ್ಯ. 'ಗುರು-ಚೇಲಾ' ಸಂಬಂಧ ಹಿಜಡಾ ಸಮುದಾಯದ ಬಹುಮುಖ್ಯ ರಾಚನಿಕ ಸಂಬಂಧ. ಅದನ್ನು 'ಧಾರ್ಮಿಕ' ಎಂಬಂತೆ ವಿಧ್ಯುಕ್ತ ರೀತಿಯಲ್ಲಿ ಪವಿತ್ರೀಕರಿಸಿ ಪಾಲಿಸುತ್ತಾರೆ. ಅದು ಎಂದೂ 'ಅಪವಿತ್ರ'ಗೊಳ್ಳ ಬಾರದ್ದು ಎಂದಿದ್ದರೂ ಕಡ್ಡಾಯವಾಗಿ ಶಾಶ್ವತವಾದದ್ದೂ ಅಲ್ಲ. ಸ್ವತಃ ರೇವತಿಯೇ ಹಲವು ಬಾರಿ ತಮ್ಮ 'ಗುರು'ವನ್ನು ಬದಲಿಸಿದ್ದಾರೆ. ಹಾಗೆಯೇ ಬೇರೆ ಬೇರೆ ರೀತಿಯ ಚೇಲಾಗಳಿಗೆ ಆಕೆಯೂ 'ಗುರು'ವಾಗಿದ್ದಾರೆ. ಈ ಗುರು-ಚೇಲಾ ಸಂಬಂಧಗಳನ್ನು ಅಜ್ಜಿ-ತಾಯಿ-ಮಗಳು-ಮೊಮ್ಮಗಳು ಎಂಬ ರೀತಿಯ ಸ್ತ್ರೀಬಾಂಧವ್ಯವೆಂದು ಅವರು ಗುರುತಿಸಿಕೊಂಡಿರುವುದು ಕುತೂಹಲಕಾರಿ. ಈ ಸ್ತ್ರೀಯರು ಪಿತೃಸಂಸ್ಕೃತಿಯ ಮಾದರಿಯ 'ರಕ್ತಸಂಬಂಧ' 'ಔರಸತ್ವ,' 'ಆಸ್ತಿಯ ಉತ್ತರಾಧಿ ಕಾರಿತ್ವ'ಗಳ ಯಾವ ಗೋಜಲೂ ಇಲ್ಲದೆ ತಮ್ಮಿಂದ ತಾವೇ ಇಂಥ ಬಾಂಧವ್ಯಗಳನ್ನು ರೂಪಿಸಿಕೊಂಡಿರುವುದನ್ನು ಗಮನಿಸುವುದು ಅವಶ್ಯಕ. ಈ ಹಿಜಡಾಗಳಿಗೆಲ್ಲ ಆ ಸಮುದಾಯದ ವಿಧಿಗಳು, ಆಚರಣೆಗಳು, ಸಂಭ್ರಮದ ಗಳಿಗೆಗಳು ಹೇಗೋ ಹಾಗೆಯೇ ಕಡ್ಡಾಯದ ರೀತಿ ರಿವಾಜುಗಳಿಂದಾಗಿ ಅವು ಹಿಂಸಾತ್ಮಕವೂ, ಹಿಜಡಾಗಳಿಗೆ ನಿರ್ಬಂಧಕಾರಿಯೂ ಆಗಿರುವ ಇನ್ನೊಂದು ಮುಖವನ್ನೂ ರೇವತಿ ತೆರೆದಿಡುತ್ತಾರೆ. ಇಷ್ಟಾದರೂ ಒಬ್ಬ ಹಿಜಡಾ ಆಗಿ, ಲೈಂಗಿಕ ಕಾರ್ಯಕರ್ತೆಯೂ ಆಗಬೇಕಾಗಿ ಬಂದಾಗ ರೇವತಿಯ ಬದುಕಿನಲ್ಲಿ ಕಿಂಚಿತ್ತಾದರೂ ಅಂತಃಕರಣ, ವಿಶ್ವಾಸ, ಸ್ನೇಹದ ಅನುಭವ ದೊರೆತಿದ್ದರೆ ಅದು ಈ ಸಮುದಾಯದಿಂದಲೇ ಎನ್ನುವ ಅಂಶವೂ ಈ ಚಿತ್ರಣದಿಂದ ಓದುಗರ ಮನಸ್ಸಿಗೆ ಮುಟ್ಟುವಂತಿದೆ.*

ಆದಿವಾಸಿಗಳ ಮಾನವೀಯ ಮತ್ತು ನಾಗರಿಕ ಹಕ್ಕುಗಳಿಗಾಗಿ ಹೋರಾಡುವ ಸಾಮಾಜಿಕ ಸಂಘಟನೆಯಾದ "ಸಂಗಮ"ಕ್ಕೆ ಪರಿಚಯಿಸಿದರು. ಅದುವರೆಗೂ ಬೀದಿಗಳಲ್ಲಿ ಬದುಕುವ, ದಂಧೆ ಅಥವಾ ಲೈಂಗಿಕ ಕಾರ್ಯಗಾರಿಕೆಯ ಕಷ್ಟದಲ್ಲಿಯೇ ಬದುಕುತ್ತಿದ್ದ, ಅತ್ಯಲ್ಪ ಆದಾಯವಿದ್ದ, ಅವರ ನೂರುಪಟ್ಟು ಯಾತನೆ, ಅವಮಾನಗಳನ್ನು ಉಣ್ಣುತ್ತಿದ್ದ ರೇವತಿಯವರ ಅಂಥ ಬದುಕಿಗೆ ಒಂದು ಮಂಗಳ ಹಾಡಿದ್ದೂ "ಸಂಗಮ"ದವರ ಜೊತೆ ಲಭಿಸಿದ ಪರಿಚಯವೇ. ಅಲ್ಲಿನ ಕಾರ್ಯಕರ್ತರ ಸಾಮಾಜಿಕ ಹೋರಾಟಗಳಲ್ಲಿ ತಮ್ಮನ್ನೂ ತೊಡಗಿಸಿಕೊಂಡು, ಕಛೇರಿಯ ಸಹಾಯಕರಾಗಿ ಗೌರವಯುತ ಉದ್ಯೋಗವನ್ನೂ, ಅಷ್ಟೇ ನ್ಯಾಯಯುತವಾಗಿ ಸಂಪಾದಿಸಿ ಬದುಕುವ ಘನತೆಯನ್ನೂ ರೇವತಿ ಗಳಿಸಿಕೊಂಡರು. 'ಸಂಗಮ'ದೊಂದಿಗೆ ದುಡಿಯುತ್ತಿರುವಾಗಲೇ ಅತ್ಯಲ್ಪ ಅವಧಿಯ 'ವೈವಾಹಿಕ' ಬದುಕಿನ ಅನುಭವ ಕೂಡ ಅವರಿಗೆ ಒದಗಿತ್ತು. ಅದರ ಕಹಿಯೂ ಈ ಆತ್ಮಕಥೆಯಲ್ಲಿ ಸೇರಿದೆ.

"ಸಂಗಮ"ದ ಕಾರ್ಯಕರ್ತರು ರೇವತಿಗೆ ಹಿಜಡಾಗಳ, ದಲಿತರ ಮತ್ತು ಆದಿವಾಸಿಗಳಂಥ ಸೀಮಾಂತದ ನೆಲೆಯ ಸಮುದಾಯಗಳ ಹಕ್ಕುಗಳ ಬಗ್ಗೆ, ಹೋರಾಟಗಳ ಬಗ್ಗೆ ಅರಿವು ಮೂಡಿಸಿದರು. 'ನಾವು ಹೋರಾಟ ಮಾಡುತ್ತಿದ್ದೇವೆ' ಎಂದು ಹೇಳಿಕೊಳ್ಳದೆಯೇ ಕಾರ್ಯತಃ ಮಾಡಿ ತೋರಿಸುತ್ತಿದ್ದ ಅವರಿಂದ ರೇವತಿಯಲ್ಲಿ ಸ್ವಪ್ರಜ್ಞೆ, ಸ್ವಾಧಿಕೃತತೆಗಳೂ ವಿಕಾಸಗೊಳ್ಳಲು ಸಾಧ್ಯವಾಯಿತು. ಈಗ ತಮ್ಮ 40ರ ದಶಕದ ವಯೋಮಾನದಲ್ಲಿರುವ ರೇವತಿ ತರಗತಿಗಳಲ್ಲಿ ಲೈಂಗಿಕತೆ ಮತ್ತು ಲೈಂಗಿಕ ಅಲ್ಪಸಂಖ್ಯಾತರನ್ನು ಕುರಿತು ಉಪನ್ಯಾಸಗಳನ್ನು ನೀಡುತ್ತಾರೆ. ವಿಚಾರಸಂಕಿರಣ, ಸಮಾವೇಶಗಳಲ್ಲಿ ಆ ವಿಷಯಗಳ ಬಗ್ಗೆ ಸಾರ್ವಜನಿಕ ಭಾಷಣಗಳನ್ನು ಮಾಡುತ್ತಾರೆ. ಲೆಸ್ಬಿಯನ್ನರು ಮತ್ತು HIV+Veಗಳನ್ನು ಕುರಿತಂತೆಯೂ ಪುಸ್ತಕವೊಂದನ್ನು ಬರೆಯುವ ಯೋಜನೆ ಹಾಕಿಕೊಂಡಿದ್ದಾರೆ.

ಭಾರತದಲ್ಲಿ ಪರಿವರ್ತಿತ ಲಿಂಗಿಗಳ ಪರಿಸ್ಥಿತಿ, ತಾವು ಹಾಗೆ ವೇಶ್ಯಾಗಾರಿಕೆಯಿಂದ ಬದುಕುವಾಗ ಇದ್ದದ್ದಕ್ಕಿಂತ ಈಗ ಹೆಚ್ಚು ಸುಧಾರಿಸಿದೆ ಎಂದು ರೇವತಿ ಭಾವಿಸುತ್ತಾರೆ. "ನಾನು ವೇಶ್ಯಾಗಾರಿಕೆ ಯಿಂದಲೇ ಬದುಕುತ್ತಿದ್ದಾಗ ಅನುಭವಿಸಬೇಕಾಗಿ ಬಂದ ಲೈಂಗಿಕ ದೌರ್ಜನ್ಯ, ಹಿಂಸಾಚಾರಗಳು ಈಚೆಗೆ ಕಡಿಮೆಯಾಗುತ್ತಿವೆ. ಸಾಮಾನ್ಯ ಜನರು ಸಾರ್ವಜನಿಕವಾಗಿ ನಮಗೀಗ ಅಷ್ಟೊಂದು ಕಾಟ ಕೊಡುವುದಿಲ್ಲ. ಪೊಲೀಸರೂ ಸಹ ನಮ್ಮ ಮೇಲೆ ಹಿಂಸಾಚಾರ ಎಸಗುವುದು, ನಮ್ಮಿಂದ ಲಂಚ ಕೀಳುವುದು ಈಗ ಕಡಿಮೆಯಾಗಿದೆ. ಯಾರೋ ಒಬ್ಬರು ಹಿಜಡಾ ಸೆರೆ ಸಿಕ್ಕಿದರೆಂದು, ಅಥವಾ ಅವರ ಹಕ್ಕನ್ನು ಅವರಿಗೆ ನೀಡಿಲ್ಲವೆಂದು ನಾನು ಪೊಲೀಸ್‌ಠಾಣೆಗೆ ಹೋಗುತ್ತೇನೆ. ಪೊಲೀಸರು 'ಮ್ಯಾಡಮ್' ಎಂದು ಸಂಬೋಧಿಸಿ ಕುಳಿತುಕೊಳ್ಳಿ ಎಂದು ಗೌರವ ಸೂಚಿಸುತ್ತಾರೆ" ಎನ್ನುವ ರೇವತಿಗೇನೋ ಅವರು ಹಂಬಲಿಸಿದ ಮಾನ್ಯತೆ-ಗೌರವ ದೊರೆತಿದೆ. ಆದರೆ ನಿಜವಾಗಿ ಹಿಜಡಾಗಳ ಅಥವಾ ಇನ್ನಿತರ ಲೈಂಗಿಕ ಅಲ್ಪಸಂಖ್ಯಾತರ ಹಕ್ಕುಗಳನ್ನು ಸಮಾಜ ಅವರಿಗೆ ಕೊಟ್ಟಿದೆಯೆ?

*(ಈ ಲೇಖನಕ್ಕೆ ದು. ಸರಸ್ವತಿಯವರ ಅನುವಾದಿತ ಕೃತಿ "ಬದುಕು ಬಯಲು: ಹಿಜ್ರಾ ಒಬ್ಬಳ ಆತ್ಮಕಥೆ" ಮತ್ತು ಹಿಂದೂ, ಟೈಮ್ಸ್ ಮುಂತಾದ ಹಲವು ಪತ್ರಿಕೆಗಳಲ್ಲಿ ಪ್ರಕಟವಾಗಿರುವ ರೇವತಿಯ ಸಂದರ್ಶನಗಳು ಆಧಾರ ವಾಗಿರುತ್ತವೆ.)*



❑



# ಲೈಂಗಿಕತೆಯ ರಾಜಕೀಯ ಹರವುಗಳು

■ ಚಂಪಾವತಿ ಎಚ್.ಎಸ್.

ತಮಿಳು ನಾಡಿನ ಲಿವಿಂಗ್ ಸ್ಮೈಲ್ ವಿದ್ಯಾ, ರೇವತಿ, ಹಾಗೂ ಕೇರಳದ ನಳಿನಿ ಜಮೀಲ ತಮ್ಮ ಆತ್ಮಕತೆಗಳ ಮೂಲಕ ಮಹಿಳಾ ಸಂಘಟನೆ, ಮಹಿಳಾ ಸಾಹಿತ್ಯಗಳಲ್ಲದೇ ಮುಖ್ಯವಾಹಿನಿ ಎಂದೆನ್ನಿಸಿಕೊಳ್ಳುವ ಸಾಹಿತ್ಯ, ಪತ್ರಿಕೆ, ದೃಶ್ಯಮಾಧ್ಯಮ ಹಾಗೂ ಸಾರ್ವಜನಿಕ ವಲಯ ದಲ್ಲಿಯೂ ಸಂಚಲನ ಮೂಡಿಸುವಲ್ಲಿ ಒಂದು ಮಟ್ಟಕ್ಕೆ ಯಶಸ್ವಿ ಯಾಗಿದ್ದಾರೆ. ಇವರ ಕಥಾನಕಗಳಿಗೆ ಮುಖಾಮುಖಿಯಾಗುವ ಪ್ರತಿಯೊಬ್ಬರ ಮನದಾಳದಲ್ಲಿ ಬೆಚ್ಚಿಸುವ ಹಲವಾರು ಸತ್ಯ ಸಂಗತಿಗಳು ಇವರ ಕೃತಿಗಳಲ್ಲಿ ದಾಖಲಾಗಿವೆ. ಭಯಾನಕ ವಾಸ್ತವಗಳಿವೆ, ನಾವರಿಯದ ಪ್ರಪಂಚವಿದೆ. ಆ ಲೋಕದ ಅನಾವರಣವೂ ಇದೆ. ಆತ್ಮಕತೆಗಳಲ್ಲಿನ ಅನುಭವಗಳ ಪ್ರಾಮಾಣಿಕತೆ ಹೃದಯವನ್ನು ಹಿಂಡುವುದರ ಜೊತೆಗೆ ಅನೇಕ ತಾತ್ವಿಕ ಪ್ರಶ್ನೆಗಳಿಗೆ ದಾರಿಮಾಡಿ ಕೊಡುತ್ತವೆ. ಸಮುದಾಯದ ಪ್ರತಿನಿಧೀಕರಣಗಳಾಗಿ ಮೂಡಿಬಂದ ಈ ಮೂರೂ ಕೃತಿಗಳು ಚಳವಳಿಯ ಜೊತೆ ಒಂದಲ್ಲ ಒಂದು ರೀತಿ ತಳಕು ಹಾಕಿಕೊಂಡಿವೆ. ಅಸ್ತಿತ್ವದ ಹೋರಾಟವನ್ನು ಒಳಗೊಂಡಿವೆ. ಹಾಗಾಗಿ ಈ ಕೃತಿಗಳು ಎತ್ತುತ್ತಿರುವ ರಾಜಕೀಯ ಹಾಗೂ ತಾತ್ವಿಕ ಪ್ರಶ್ನೆಗಳನ್ನು ಕುರಿತು ಚರ್ಚಿಸುವುದು ಈ ಲೇಖನದ ಉದ್ದೇಶವಾಗಿದೆ. ಭಿನ್ನ, ಭಿನ್ನ ನೆಲೆಗಳಲ್ಲಿ ಈ ಮೂರೂ ಆತ್ಮಕಥನಗಳು ಎತ್ತುವ ಮುಖ್ಯವಾದ ಮೂರು ಪ್ರಶ್ನೆಗಳು: **1. ಲಿಂಗಾಧರಿತ ಅಸ್ತಿತ್ವದ ಹಾಗೂ ಸಾಮಾಜಿಕ ವಿಭಜನೆಯ ರಾಜಕೀಯ 2. ಲೈಂಗಿಕತೆಯ ನಿಯಂತ್ರಣ 3. ಐಡೆಂಟಿಟಿ ರಾಜಕೀಯದ ಚಳವಳಿ ಮತ್ತು ಪರ್ಯಾಯಗಳು.**

**1. ಲಿಂಗಾಧರಿತ ಅಸ್ತಿತ್ವದ ಹಾಗೂ ಸಾಮಾಜಿಕ ವಿಭಜನೆಯ ರಾಜಕೀಯ**

ಲಿವಿಂಗ್ ಸ್ಮೈಲ್ ವಿದ್ಯಾ ತಮ್ಮ 'ನಾನು ಅವನಲ್ಲ..... ಅವಳು' ಹಾಗೂ ರೇವತಿ 'ಎ ಹಿಜ್ರಾ ಲೈಫ್ ಹಿಸ್ಟರಿ'ಯ ತಮ್ಮ ಆತ್ಮಕಥಾನಕಗಳಲ್ಲಿ ಮುಖ್ಯವಾಗಿ ಎತ್ತುವ ಪ್ರಶ್ನೆ ದೈಹಿಕ ಅಸ್ಮಿತೆಯ ಕುರಿತಾದದ್ದು. ನಳಿನಿ ಜಮೀಲ ಲೈಂಗಿಕ ಕಾರ್ಯಕರ್ತೆಯಾಗಿ ದುಡಿದು, ಹೋರಾಟ ನಡೆಸಿದ ಹಿನ್ನೆಲೆಯಲ್ಲಿ ತಮ್ಮ 'ದಿ ಆಟೋಬಯೋಗ್ರಫಿ ಆಫ್ ಎ ಸೆಕ್ಸ್‌ವರ್ಕರ್' ನಲ್ಲಿ ಲಿಂಗಾಧರಿತ ಅಸ್ತಿತ್ವ ಹಾಗೂ ಸಾಮಾಜಿಕ ವಿಭಜನೆಯ ಜೊತೆಗೆ ಲೈಂಗಿಕತೆಯ ರಾಜಕೀಯವನ್ನು ವರ್ಗಹಿನ್ನೆಲೆ ಮತ್ತು ಶ್ರಮಿಕ ಮಹಿಳೆಯ ಶ್ರಮಕಲ್ಪನೆಯ ಹಿನ್ನೆಲೆಯಲ್ಲಿ ಎತ್ತುತ್ತಾರೆ. ಈ ಸಮುದಾಯಗಳು ಎತ್ತುವ ಹಲವಾರು ಪ್ರಶ್ನೆಗಳಿಂದಾಗಿ ಅನೇಕ ಸವಾಲುಗಳನ್ನು ಮಹಿಳಾಚಳವಳಿ ಮಾತ್ರವಲ್ಲ, ಇತರ ಪ್ರಗತಿಪರ ಚಳವಳಿಗಳೂ ಕೂಡಾ ಎದುರಿಸುತ್ತಿವೆ. ಸ್ವಾಯತ್ತ ಮಹಿಳಾಚಳವಳಿಗೆ ಅಥವಾ ಯಾವುದೇ ಚಳವಳಿಗೆ ಹೋರಾಟದ ಹಾದಿಯಲ್ಲಿ ಇನ್‌ಕ್ಲುಸೀವ್‌ಆದ ಒಂದು ತಾತ್ವಿಕ ನಿಲುವು, ಕಲ್ಪನೆ ಅಗತ್ಯ ಎನ್ನುವ ಹಿನ್ನೆಲೆಯಲ್ಲಿ ಕೂಡಾ ಈ ಸವಾಲುಗಳನ್ನು ಕುರಿತು ಚರ್ಚಿಸುವುದು ಅಗತ್ಯವಾಗುತ್ತದೆ.

ಗಂಡು-ಹೆಣ್ಣಿನ ಲಿಂಗಾಧಾರದ ಮೇಲೆ ವ್ಯಾಖ್ಯಾನವಾಗುತ್ತಿರುವ ಪ್ರಪಂಚದ ಆಗು-ಹೋಗುಗಳನ್ನು ಬಲವಾಗಿ ಪ್ರಶ್ನಿಸುತ್ತಿರುವವರು ಹಿಜರಾಗಳು. ಸ್ತ್ರೀವಾದಿಗಳು ಇದನ್ನು ಪ್ರಶ್ನಿಸಿಲ್ಲವೆಂದಲ್ಲ. ಲೆಸ್‌ಬಿಯನ್ ಗುಂಪುಗಳು ಹೆಣ್ಣು-ಗಂಡಿನ ಲಿಂಗಾಧಾರದ ವಿಭಜನೆ ಹಾಗೂ ಶ್ರೇಣೀಕರಣದ ಆಧಾರದ ಮೇಲೆ ರೂಪಿತವಾದ ಪಿತೃಪ್ರಧಾನತೆ - ಕುಟುಂಬದ ವ್ಯವಸ್ಥೆ ಹಾಗೂ ಲೈಂಗಿಕತೆಯನ್ನು ಯಶಸ್ವಿಯಾಗಿ ನಡೆಸಿಕೊಂಡು ಹೋಗುವ ಹುನ್ನಾರ ಮಾಡುತ್ತದೆ ಎಂಬ ಕಾರಣ ಕ್ಕಾಗಿಯೇ ಕುಟುಂಬ ವ್ಯವಸ್ಥೆ ನಿರಾಕರಿಸಿದವರು, ಹೆಣ್ಣು-ಹೆಣ್ಣಿನ ನಡುವಿನ ಲೈಂಗಿಕತೆಯಲ್ಲಿ ಅರ್ಥ ಹುಡುಕಿದವರು, ಪಿತೃಪ್ರಧಾನ ವ್ಯವಸ್ಥೆಯ ವಿರುದ್ಧ ಸಿಡಿದೆದ್ದವರು, ಕುಟುಂಬ ವ್ಯವಸ್ಥೆಯಲ್ಲಿ ಇರುವ ಪಿತೃಪ್ರಾಧಾನ್ಯ ಹಾಗೂ ಬಂಡವಾಳಶಾಹಿತ್ವ ಹೆಣ್ಣಿನ ಬಹುಮುಖ ವ್ಯಕ್ತಿತ್ವದ ವಿಕಾಸಕ್ಕೆ ಅಡ್ಡಿಯಾಗಿದೆ ಎಂದು ಆಲೋಚಿಸುವ ಹಲವಾರು ಮಹಿಳಾ ಸಂಘಟನೆಗಳು ಕುಟುಂಬ ವ್ಯವಸ್ಥೆಯಲ್ಲಿಯೇ ಬದಲಾವಣೆ


ರೇವತಿ

ಬಯಸಿ ಹೆಣ್ಣಿನಲ್ಲಿರುವ ಗಂಡುತನ ಹಾಗೂ ಗಂಡಿನಲ್ಲಿರುವ ಹೆಣ್ಣುತನದ ಬಗ್ಗೆ ವಿಶ್ಲೇಷಿಸುತ್ತಾ ಅರ್ಧನಾರೀಶ್ವರ ಕಲ್ಪನೆಯನ್ನು ಎತ್ತಿ ಹಿಡಿಯುತ್ತಲೇ ಬಂದಿದ್ದಾರೆ. ನಾನು ಆಗಸ್ಟ್ 2009 ರ 'ಮಾನಸ' ಸಂಚಿಕೆಯಲ್ಲಿ ಬರೆದ 'ಗಂಡು-ಹೆಣ್ಣಾದ ಬದುಕಿನ ಕಥನಗಳು' ಲೇಖನದಲ್ಲಿ ಚರ್ಚಿಸಿದಂತೆ ಅರ್ಧನಾರೀಶ್ವರ ಕಲ್ಪನೆಯನ್ನು ಎತ್ತಿ ಹಿಡಿಯುವಾಗ ನಾವು ಮಾತನಾಡುವ ಲಯ ಆಂತರ್ಯಕ್ಕೆ, ಮನಸ್ಸಿನ ವಲಯಕ್ಕೆ ಸೇರಿದ್ದು. ಗಡ್ಡ ಮೀಸೆಯುಳ್ಳ ಗಂಡಸು ಮೆದುವಾಗಿರುವುದು, ಅಂತ:ಕರಣ ಹೊಂದಿರುವುದು, ಕಾಳಜಿ ವಹಿಸುವುದು, ಕೌಟುಂಬಿಕ ಪರಿಸರದಲ್ಲಿ ಅತ್ಯಂತ ಆತ್ಮೀಯವಾಗಿ ಇರುವುದು- ಇವು ಗಂಡಿನಲ್ಲಿರುವ 'ಹೆಣ್ತನಗಳು' ಎಂದುಕೊಂಡರೆ, ಮೊಲೆಯುಳ್ಳ ಹೆಣ್ಣು ಈ ಬಾಹ್ಯ ಪ್ರಪಂಚಕ್ಕೆ ಮುಖಾಮುಖಿಯಾಗಿ ಎಲ್ಲದಕ್ಕೂ ಮುಂದೆ ಹೋಗುವ, ಎಲ್ಲವನ್ನೂ ಪ್ರಶ್ನಿಸುವ, ಎಲ್ಲವನ್ನೂ ಎದುರಿಸುವ ಮನಃಸ್ಥಿತಿಯವಳಾದರೆ ಇವು ಆಕೆಯಲ್ಲಿರುವ 'ಗಂಡುತನ' ಗಳು ಎಂದು ಗುರುತಿಸುತ್ತೇವೆ. ಈ ಗಂಡುತನ ಹಾಗೂ ಹೆಣ್ಣುತನಗಳನ್ನು ಬಾಹ್ಯ ಚಹರೆಗಳಿಂದಾಗಿ ಗುರುತಿಸುವ ಬಗ್ಗೆ ನಮ್ಮ ತಕರಾರು ಯಾವಾಗಲೂ ಇದ್ದೇ ಇದೆ. ಈ ಮೂಲಕ ಕುಟುಂಬದ ಶ್ರಮ ವಿಭಜನೆಯನ್ನು, ಗಂಡು-ಹೆಣ್ಣು ನಿರ್ವಹಿಸುವ ಪಾತ್ರಗಳ ಬದಲಾವಣೆಯನ್ನೂ ಒತ್ತಾಯಿಸಿದ್ದೇವೆ.

ಆದರೆ ಈ ಚರ್ಚೆ ಗಂಡು-ಹೆಣ್ಣು ಆಧಾರದ ಮೇಲಿನ ಶೋಷಣೆಯನ್ನು ಬಯಲಿಗೆಳೆಯಿತೇ ಹೊರತು, ಅನ್ಯ ಲಿಂಗಿಗಳನ್ನು ಈ ತಾತ್ವಿಕ ಚೌಕಟ್ಟಿನಲ್ಲಿ ಒಳಗೊಳ್ಳುವ ಬಗೆಯವಾಗಿರಲಿಲ್ಲ. ಯಾವಾಗ ಹಿಜರಾಗಳ ಹೋರಾಟ ಪ್ರಧಾನಸಂಸ್ಕೃತಿಯನ್ನು, ಮುಖ್ಯ ವಾಹಿನಿಯನ್ನು ಪ್ರಶ್ನಿಸಿ ಬೆಳೆಯತೊಡಗಿತೋ, ಅನ್ಯಲಿಂಗಿಗಳನ್ನೊಳಗೊಂಡ ಬದುಕಿನ ತಾತ್ವಿಕನೋಟ, ತಾತ್ವಿಕತೆಯ ಕಲ್ಪನೆಯ ಹುಡುಕಾಟಗಳು ಈಗ ನಡೆಯುತ್ತಲೇ ಇವೆ. ಲಿವಿಂಗ್ ಸ್ಮೈಲ್ ವಿದ್ಯಾ, ರೇವತಿಯರ ಬದುಕಿನ ಕಥನಗಳು ಗಂಡು ಹಾಗೂ ಹೆಣ್ಣೂ ಅಲ್ಲದ ಅನ್ಯ ಲಿಂಗಿಗಳ ಬದುಕನ್ನು ಸಹನೀಯವಾಗಿಸಬಲ್ಲ ಸಾಮಾಜಿಕ ವಿಶ್ಲೇಷಣೆಯನ್ನು, ಸಾಮಾಜಿಕ ನ್ಯಾಯವನ್ನು, ಕುಟುಂಬದ ರಚನೆಯನ್ನು, ಪರ್ಯಾಯ ಸಾಮಾಜಿಕ ರಚನೆಗಳನ್ನು ಬಯಸುತ್ತವೆ ಹಾಗೂ ಒತ್ತಾಯಿಸುತ್ತವೆ. ಗಂಡು- ಹೆಣ್ಣು ಎಂದು ಸ್ಪಷ್ಟವಾದ ಎರಡು ವಿಭಾಗಗಳನ್ನು ನೋಡಿರುವ ನಮಗೆ ಹಿಜ್ರಾ ಜನರ ಗಂಡಿನ ವೇಷದೊಳಗೆ ಬಂಧಿತವಾಗಿರುವ ಹೆಣ್ಣಿನ ಮನಸ್ಸಿನ ದುಗುಡ, ಆತಂಕಗಳು'ನಾರ್ಮಲ್' ಎನ್ನುವ ನಮ್ಮ ಬದುಕನ್ನು ಒರೆಗೆ ಹಚ್ಚುವಂತೆ ಮಾಡುತ್ತವೆ. ಬಾಹ್ಯವಾಗಿ ಗಂಡಿನ ವೇಷದಲ್ಲಿದ್ದು ಅಂತರಂಗ ದಲ್ಲಿ ಹೆಣ್ತನದ ಭಾವನೆಗಳ ರೌದ್ರ ಸ್ವರೂಪದಿಂದ ಬಿಡುಗಡೆ ಹೊಂದುವ ತಮ್ಮ ಬದುಕಿನ ಪಯಣದಲ್ಲಿ ಇರುವ ಒತ್ತಡಗಳು, ಸವಾಲುಗಳುಗಳ ಮೇಲೆ ಬೆಳಕು ಚೆಲ್ಲುವ ವಿದ್ಯಾ ಹಾಗೂ ರೇವತಿ ಅನ್ಯ ಲಿಂಗಿಗಳನ್ನು ಈ ಸಮಾಜ ಹಾಗೂ ಕುಟುಂಬ ಸಹಜವಾಗಿ ಸ್ವೀಕರಿಸುವತನಕ ಹಿಜ್ರಾಗಳು ಭಿಕ್ಷೆ ಬೇಡುವುದನ್ನಾಗಲೀ, ಲೈಂಗಿಕ ಕಾರ್ಯಕರ್ತರಾಗಿ ದುಡಿಯುವುದನ್ನಾಗಲೀ ನಿಲ್ಲಿಸಲು ಸಾಧ್ಯವೇ ಇಲ್ಲವೆನ್ನುತ್ತಾರೆ.

ಹೀಗೆ ಹೆಣ್ಣು-ಗಂಡು ಎರಡೂ ಆಗದ ಇವರು ಈಗ ಇರುವ ಸಾಮಾಜಿಕ ಶ್ರೇಣಿಯ ವಿಭಜನೆಯಲ್ಲಿ ಭಿಕ್ಷಾಟನೆ ಹಾಗೂ ವೇಶ್ಯಾವೃತ್ತಿಗೆ ಶರಣಾಗಲೇ ಬೇಕಾದ ಅನಿವಾರ್ಯತೆಯನ್ನು ಎದುರಿಸುತ್ತಿರುತ್ತಾರೆ. ಲಿಂಗಾಧರಿತ ಸಮಾಜದ ಪೂರ್ವಗ್ರಹ ಪೀಡಿತ ನಿಲುವುಗಳನ್ನು ಪ್ರಶ್ನಿಸುತ್ತಲೇ ಸಾಮಾಜಿಕ ರಚನೆಗಳು ತಮ್ಮನ್ನು ಒಳಗೊಳ್ಳಬೇಕಾದಲ್ಲಿ ಸದ್ಯದ ಹಲವಾರು ಬೇಡಿಕೆಗಳನ್ನು ಇವರು ಇಡುತ್ತಾರೆ. ಹಿಜ್ರಾಗಳನ್ನು ಸಹಜವಾಗಿ ಸ್ವೀಕರಿಸುವಂತಹ ವಾತಾವರಣ ನಿರ್ಮಿಸುವುದು, 'ನಿರ್ವಾಣ'ದಂತಹ ಆಪರೇಷನ್‌ಅನ್ನು ನ್ಯಾಯಬದ್ಧ ವಾಗಿಸಿ ಇಂತಹ ಆಪರೇಷನ್‌ಗಳಿಗೆ ಸೌಲಭ್ಯ ಕಲ್ಪಿಸುವುದು, ಆಪರೇಷನ್ ಆದ ಮೇಲೆ ಹೆಣ್ಣಾಗಿ ಮಾರ್ಪಾಡಾಗಿರುವುದಕ್ಕೆ ಅರ್ಹತಾಪತ್ರ ನೀಡುವುದು, ವೀಸಾ, ಪಾಸ್‌ಪೋರ್ಟ್, ರೇಷನ್‌ಕಾರ್ಡ್ ನೀಡುವುದು, ಶಿಕ್ಷಣ ಹಾಗೂ ಉದ್ಯೋಗಕ್ಕೆ ವಿಶೇಷ ಅವಕಾಶ ಕಲ್ಪಿಸುವುದು, ಇವರ ಬಗ್ಗೆ ಬಳಸುವ ಭಾಷೆಯನ್ನು ನಿಷೇಧಿಸುವುದು, ಇವರ ಬಗ್ಗೆ ಕುಟುಂಬ ಹಾಗೂ ಸಮಾಜದಲ್ಲಿ ಅರಿವು ಮೂಡಿಸುವುದು - ಇಂತಹ ಪ್ರಯತ್ನಗಳು ಹಿಜ್ರಾಗಳ ಬದುಕನ್ನು ಸಹನೀಯವಾಗಿಸುವಲ್ಲಿ ಹತ್ತು ಹಲವು ಹೆಜ್ಜೆಗಳು ಮಾತ್ರ. ಈ ಸುತ್ತ ಹಿಜ್ರಾಗಳು ಸಂಘಟಿತರಾಗಿ ಹೋರಾಡುತ್ತಿರುವುದನ್ನೂ ನಾವು ಕಾಣಬಹುದಾಗಿದೆ.

ನಳಿನಿ ಜಮೀಲ ಕೆಳಮಧ್ಯಮ ಹಾಗೂ ಕೆಳಜಾತಿಯಿಂದ ಬಂದವರು. ಕೂಲಿಯಾಗಿ ಕೆಲಸ ಮಾಡಿದವರು. ಮದುವೆಯಾಗಿ, ಗಂಡನ ಸಾವಿನ ನಂತರದಲ್ಲಿ ಲೈಂಗಿಕ ಕಾರ್ಯಕರ್ತೆಯಾದವರು. ಈಕೆಯ ಆತ್ಮಕತೆಯನ್ನು ಅನುವಾದಿಸಿ ಮುನ್ನುಡಿ ಬರೆದ ಜೆ.ದೇವಿಕರವರು ನಳಿನಿಜಮೀಲ ಹಾಗೂ ದಿವಂಗತ ಲೇಖಕಿ ಕಮಲಾದಾಸ್‌ರನ್ನು ಒಂದು ಹಂತದಲ್ಲಿ ಹೋಲಿಸಿ ನೋಡುತ್ತಾರೆ. 'ನನ್ನ ಕಥೆ' ಎಂಬ ಆತ್ಮಕತೆ ಬರೆದ ಮಲೆಯಾಳಂ ಲೇಖಕಿ ಕಮಲಾದಾಸ್ ಆ ಕೃತಿ ವಿವಾದಕ್ಕೊಳಗಾದಾಗ ಅದು ಕಾಲ್ಪನಿಕ ಕತೆ ಎಂದು ಹಿಂದಕ್ಕೆ ಸರಿದುದುಂಟು. ಆದರೆ ನಳಿನಿಜಮೀಲ ಅವರು ಆತ್ಮಕತೆಯ ಮೊದಲ ಆವೃತ್ತಿಯಲ್ಲಿನ ಅನೇಕ ತಪ್ಪುಗಳನ್ನು ಸರಿಪಡಿಸಿ, ತಮಗೆ ಒಪ್ಪಿಗೆಯಾಗುವ, ತೃಪ್ತಿಯಾಗುವ ರೀತಿಯಲ್ಲಿ ತಮ್ಮ ವಿವಾದಾತ್ಮಕ ಆತ್ಮಕತೆಯನ್ನು ಮತ್ತೊಮ್ಮೆ ಬರೆದು ಪ್ರಕಟಿಸುತ್ತಾರೆ. ಆ ಮೂಲಕ ಸಾರ್ವಜನಿಕವಾಗಿ ತಮ್ಮ ಆತ್ಮಕತೆಯನ್ನು ತಮ್ಮದೇ ಎಂದು ಸ್ಪಷ್ಟಪಡಿಸುತ್ತಾರೆ. ಮಲೆಯಾಳಿ ಲೇಖಕ ಮುಕುಂದನ್ ಈ ಬಗ್ಗೆ ಹೇಳುತ್ತಾರೆ: 'ಮುಂದಿನ ದಿನಗಳಲ್ಲಿ ಹೆಚ್ಚು ಮಾರಾಟವಾಗುವ ಪುಸ್ತಕ ನಮ್ಮ ಭಾಷೆಯಲ್ಲಿ ಬರೆದ ಅತ್ಯುತ್ತಮ ಲೇಖಕನದ್ದಲ್ಲ, ಆದರೆ ಒಬ್ಬ ಲೈಂಗಿಕ ಕಾರ್ಯಕರ್ತೆಯದೋ ಅಥವಾ ಲೈಂಗಿಕ ಕಲಸಕ್ಕೆ ಇಂಬು ಕೊಡುವ ಮಹಿಳೆಯದೋ ಆಗಿರುತ್ತದೆ'. (ಅನುವಾದಕಿಯ ಮುನ್ನುಡಿಯಿಂದ) ಇಂತಹ ಎಲ್ಲಾ ವಿವಾದಗಳ ನಡುವೆಯೂ ನಳಿನಿ ಜಮೀಲ ಸಾರ್ವಜನಿಕವಾಗಿ ಲೈಂಗಿಕ ಕಾರ್ಯಕರ್ತೆಯರ ಅನುಭವಗಳ ಮುಖಗಳನ್ನು ಹಾಗೂ ಶೋಷಣೆಯನ್ನೂ ಮಾತನಾಡುತ್ತಾರೆ.

ಲಿಂಗಾಧರಿತ ಅಸ್ತಿತ್ವ ಹಾಗೂ ಸಾಮಾಜಿಕ ವಿಭಜನೆಯ ರಾಜಕೀಯ ಕುರಿತು ಜಮೀಲ ತಮ್ಮ ಆತ್ಮಕತೆಯಲ್ಲಿ ಏನು ಹೇಳುತ್ತಾರೆ ಎಂಬುದು ಕುತೂಹಲಕಾರಿ ಅಂಶವಾಗಿದೆ. ಈಕೆ ಪಿತೃಪ್ರಧಾನ ಸಮಾಜದ ಮೌಲ್ಯಗಳಿಗೆ ಎದುರಾಗಿ ನಿಲ್ಲುವುದು ಆಕೆಯ ನಿಲುಗಡೆಯಿಲ್ಲದ ಬದುಕಿನಿಂದ. ಅನೇಕರ ಜೊತೆಗೆ ಬದುಕುವ, ಆಗಾಗ್ಗೆ ಮದುವೆ ಯಾಗುವ, ಹಾಗೆಯೇ ಅಂಟಿಕೊಂಡಿರಲಾರದೇ ಮತ್ತೆ ಮತ್ತೆ ಲೈಂಗಿಕ ಕಾರ್ಯಕರ್ತೆಯಾಗಿ ಹಿಂತಿರುಗುವ ಈಕೆ ತನ್ನದು ವೃತ್ತಿ ಎಂದೇ ಗಟ್ಟಿಯಾಗಿ ನಂಬಿದವಳು. ಈ ವೃತ್ತಿಗೆ ಘನತೆ ಹಾಗೂ ಗೌರವವನ್ನು ನಿರೀಕ್ಷಿಸುವವಳು. ತನ್ನ ಈ ಕೆಲಸದಿಂದಾಗಿಯೇ ತಾನು ಸಮಾಜ

ನಿರೀಕ್ಷಿಸುವ 'ಕುಟುಂಬದ ಆದರ್ಶ' ಹೆಣ್ಣಲ್ಲ ಎಂಬ ಸವಾಲನ್ನೂ ಈಕೆ ತಮ್ಮ ಕಥನದಲ್ಲಿ ಒಪ್ಪುತ್ತಾರೆ. ಸಾಮಾಜಿಕ ವಿಭಜನೆಯ ಮಟ್ಟದಲ್ಲಿ ವೇಶ್ಯೆ ಎಂದು ಸಮಾಜ ನೀಡುವ ಪಟ್ಟವನ್ನು ಈಕೆ ಸದೃಢವಾಗಿ ತಿರಸ್ಕರಿಸುತ್ತಾರೆ. ಶ್ರಮಿಕ ಮಹಿಳೆಯ ರೀತಿಯ ಉದ್ಯೋಗ ತಮ್ಮದು ಎನ್ನುವ ಈಕೆ ಅದೇ ಗೌರವವನ್ನೂ ನಿರೀಕ್ಷಿಸುತ್ತಾರೆ. ತಮ್ಮದು ಒಂದು ರೀತಿಯ ಸ್ವಾತಂತ್ರ್ಯದ ಬದುಕು ಎಂದೂ ಕೂಡಾ ನಳಿನಿ ಜಮೀಲ ಹೆಮ್ಮೆ ಪಟ್ಟುಕೊಳ್ಳುತ್ತಾರೆ. 'ಬಲಿಪಶು' ಎಂಬ ಕಲ್ಪನೆ ತನಗೆ ಬಂದುದೇ ಇಲ್ಲವೆಂದು ಹೇಳುವ ಈಕೆ ತನ್ನನ್ನು 'ಏಜೆಂಟ್' ಎನ್ನುವ.ರೀತಿಯಲ್ಲಿಯೇ ಭಾವಿಸುತ್ತಾರೆ. ಕುಟುಂಬ ಕೇಂದ್ರಿತವಲ್ಲದ, ಆದರ್ಶ ಮಹಿಳೆಯೂ ಅಲ್ಲದ ನಳಿನಿಜಮೀಲ ಸಮಾಜದಲ್ಲಿನ ವೇಶ್ಯೆಯರ ಬಗೆಗಿನ ಕಲ್ಪನೆಗಳನ್ನು ಬುಡಮೇಲು ಮಾಡುವ ವ್ಯಕ್ತಿತ್ವ ಹೊಂದಿದವರು ಎಂದು ಜೆ.ದೇವಿಕ ನುಡಿಯುತ್ತಾರೆ. 'ಜ್ವಾಲಾಮುಖಿ' ಎಂಬ ಲೈಂಗಿಕ ಕಾರ್ಯಕರ್ತೆಯರ ಹಕ್ಕುಗಳಿಗಾಗಿ ಹೋರಾಡುವ ಸಂಘಟನೆಯಲ್ಲಿ ಕೆಲಸ ಮಾಡಲು ಪ್ರಾರಂಭಿಸುವ ಈಕೆ ತಾವು ಮಾಡುತ್ತಿರುವುದು ವೃತ್ತಿ ಎಂದೇ ಎಲ್ಲರೂ ಭಾವಿಸಬೇಕೆಂದು, ಹಾಗೂ ತಾವೇನೂ ತಪ್ಪು ಮಾಡುತ್ತಿಲ್ಲ ವೆಂಬುದನ್ನು ಮನಗಾಣಬೇಕೆಂಬುದನ್ನು ದೃಢವಾಗಿ ನುಡಿಯುತ್ತಾರೆ. ಈ ಮನಸ್ಥಿತಿ ಜಿಂದಲೇ ತಮ್ಮ ಹಕ್ಕಿನ ಹೋರಾಟದ ಕಾರ್ಯತಂತ್ರ ರೂಪಿಸಬೇಕೆಂದು ಹೇಳುವ ನಳಿನಿ ಮುಂದೆ ತಾವು ಸಾರ್ವಜನಿಕ ವ್ಯಕ್ತಿಯಾಗುತ್ತಾ ರೂಪಿತವಾದುದನ್ನು, ಸಾರ್ವಜನಿಕ ವಾಗಿ ಮಾತಾಡಿದ್ದನ್ನು, ಕೊನೆಗೆ ಸಿನೆಮಾ ಮಾಡಿದ್ದನ್ನು ಹೇಳುತ್ತಾರೆ.

**2. ಲೈಂಗಿಕತೆಯ ನಿಯಂತ್ರಣ**

ಲಿವಿಂಗ್ ಸ್ಮೈಲ್ ವಿದ್ಯಾ ತಮ್ಮ ಕಥಾನಕದಲ್ಲಿ ತಮ್ಮ ವೈಯಕ್ತಿಕ ಲೈಂಗಿಕತೆಯ ಬಗ್ಗೆ ಮಾತನಾಡುವುದೇ ಇಲ್ಲ. ಪದವೀಧರೆಯಾದ ಈಕೆ ಕೂಡ ಹೆಣ್ಣಾಗಿ ಮಾರ್ಪಾಡಾಗಲು, ನಿರ್ವಾಣ ಮಾಡಿಸಿಕೊಳ್ಳಲು ಭಿಕ್ಷೆ ಬೇಡುವ ಸ್ಥಿತಿಗೆ ತಲುಪುವುದನ್ನು ಆತಂಕದಿಂದ ಹೇಳಿಕೊಳ್ಳುತ್ತಾರೆ. ಭಿಕ್ಷೆ ಬೇಡುವುದನ್ನು, ಲೈಂಗಿಕ ಕಾರ್ಯಕರ್ತೆಯಾಗಿ ದುಡಿಯುವುದನ್ನು ಈಕೆ ಒಪ್ಪುವುದೇ ಇಲ್ಲ. ಗಂಡಾಗಿ ಹುಟ್ಟಿದ ವಿದ್ಯಾ ಗಂಡಾಗಿಯೇ ಉಳಿಯಬೇಕೆಂದು ಬಯಸಿದ ಅವರ ಕುಟುಂಬದ ಆಸೆ, ಆಕಾಂಕ್ಷೆಗಳಲ್ಲಿ ಪಿತೃಪ್ರಧಾನತೆ ಹೇಗೆ ಕೆಲಸ ಮಾಡುತ್ತದೆ ಎಂಬುದನ್ನು ನಾವು ಗಮನಿಸಬಹುದು. ಹಾಗೆಯೇ ಗಂಡು-ಹೆಣ್ಣಲ್ಲದ ಅನ್ಯ ಲಿಂಗಿಗಳನ್ನು ಪುರುಷಪ್ರಧಾನ ಸಮಾಜ ಹಂಗಿಸುವ, ಟೀಕಿಸುವ ಮೂಲಕ ಅವರಿಗೆ ಅಸ್ತಿತ್ವವೇ ಇಲ್ಲವೆಂಬಂತೆ ನೋಡುವುದನ್ನೂ ನಾವು ಗಮನಿಸಬಹುದು. ವಿದ್ಯಾ ಸೀರೆ ಉಟ್ಟಿರುವುದರಿಂದ ತಾವು ಅವರನ್ನು ನೋಡುವುದೇ ಇಲ್ಲ ಎಂದು ಹಟ ಹಿಡಿಯುವ ಅವರ ತಂದೆಯ ಬಗ್ಗೆ ಮರುಕವಾದರೂ ಈ ಸಮಾಜ ಅವರ ಮನಸ್ಸಿನೊಳಗೆ ರೂಢಿಸಿರುವ ಪೂರ್ವಾಗ್ರಹಪೀಡಿತ ಭಾವನೆಗಳು ಇಲ್ಲಿ ವ್ಯಕ್ತವಾಗುತ್ತವೆ. ನಿರ್ವಾಣದ ಹಂತದಲ್ಲಿ ಹಿಜ್ರಾ ಸಮುದಾಯದ ಜೊತೆಗೆ ಬದುಕು ಹಂಚಿಕೊಳ್ಳುವ ವಿದ್ಯಾ ಕೆಲಸದ ವಿಚಾರಕ್ಕೆ ಬಂದಾಗ ಸಮುದಾಯದಿಂದ ದೂರ ಆಗುವುದು ಕಂಡು ಬರುತ್ತದೆ. ಅವರದೇ ಆದ ನಿಲುವುಗಳಿಂದ ಬದುಕು ರೂಪಿಸಿಕೊಳ್ಳುವುದು ಅವರಿಗೆ ಮುಖ್ಯವಾಗುತ್ತದೆ.

ರೇವತಿಯವರು ತಮ್ಮ ಆತ್ಮಕತೆಯಲ್ಲಿ ಲೈಂಗಿಕ ಕಾರ್ಯಕರ್ತೆಯಾದ ತಮ್ಮ ವಿವರಗಳನ್ನು ಬಿಚ್ಚಿ ಇಡುತ್ತಾರೆ. ತಮ್ಮ ವೈಯಕ್ತಿಕ ಲೈಂಗಿಕ ಇಚ್ಛೆ ಪೂರೈಸಿ ಕೊಳ್ಳುವುದಕ್ಕಾಗಿಯೇ ಈ ಕೆಲಸಕ್ಕೆ ಇಳಿದುದಾಗಿ, ನಂತರ ಬೇರೆ ಆಯ್ಕೆ ಇಲ್ಲದೇ ಇದನ್ನೇ ವೃತ್ತಿಯಾಗಿಸಿಕೊಂಡುದ್ದಾಗಿ ನುಡಿಯುತ್ತಾರೆ. ರೇವತಿ ಒಬ್ಬ ಹಿಜ್ರಾ ಆಗಿ ಲೈಂಗಿಕ ಕಾರ್ಯಕರ್ತೆಯಾಗುವುದಕ್ಕೂ, ನಳಿನಿ ಒಬ್ಬ ಪೂರ್ಣಪ್ರಮಾಣದ ಹೆಣ್ಣಾಗಿ ಲೈಂಗಿಕ ಕಾರ್ಯಕರ್ತೆಯಾಗಿ ಎದುರಿಸುವ ಸವಾಲುಗಳಿಗೂ ಅನೇಕ ಸಾಮ್ಯತೆಗಳು ಇರುವ ಹಾಗೆಯೇ ಅನೇಕ ವ್ಯತ್ಯಾಸಗಳು ಕೂಡಾ ಇವೆ. ಹೆಣ್ಣೆಂದೇ ತೋರುವಂತೆ ಹುನ್ನಾರಗಳನ್ನು ಮಾಡಿ ಗಿರಾಕಿಗಳನ್ನು ತಮ್ಮ ಕಡೆ ಸೆಳೆಯುವ ಪ್ರಯತ್ನ ಮಾಡುತ್ತೇವೆ ಎಂದು ರೇವತಿ ಹೇಳುವಾಗ ಈ ಎರಡು ಸಮುದಾಯದ ನಡುವೆ ಇರಬಹುದಾದ ವೃತ್ತಿ ಸ್ಪರ್ಧೆಯ ಅರಿವೂ ನಮಗೆ ಉಂಟಾಗುತ್ತದೆ. ಹಿಂಸೆಯ ವಿಧಾನಗಳಲ್ಲಿ ಕೂಡಾ ಕ್ರೂರತೆಯ ಮುಖ ಭಿನ್ನವಾಗಿರುವುದನ್ನು ನಾವು ಗಮನಿಸಬಹುದು. ಹಿಜ್ರಾಗಳ ಲೈಂಗಿಕ ಚಿಹ್ನೆಯ ಬಗ್ಗೆ ಇರುವ ಅವಹೇಳನ, ಅಪಮಾನ ಹಾಗೂ ಅಮಾನವೀಯ ಕುತೂಹಲದ ಹಿನ್ನೆಲೆಯಲ್ಲಿ ಇವರ ಮೇಲೆ ನಡೆಯುವ ಲೈಂಗಿಕ ದೌರ್ಜನ್ಯಗಳು ವಿಚಿತ್ರವಾಗಿರುತ್ತವೆ. ಅವರ ಅಸ್ತಿತ್ವವನ್ನೇ ಕಡೆಗಾಣಿಸುವಂತಿರುತ್ತವೆ. ಸಮುದಾಯದ ನಡುವೆಯೇ ಬದುಕಿ, ಸಮುದಾಯದ ನಡುವೆಯೇ ಬದುಕಿನ ದಾರಿಗಳನ್ನು ಕಂಡುಕೊಂಡ ರೇವತಿ ಇಲ್ಲಿನ ಲೈಂಗಿಕ ವೃತ್ತಿಯೊಳಗೇ ಇರಬಹುದಾದ ಶ್ರೇಣೀಕೃತ ಸಂಬಂಧಗಳನ್ನೂ ಬಯಲಿ ಗೆಳೆಯುತ್ತಾರೆ. ಸಮುದಾಯದ ಭಿನ್ನ ಭಿನ್ನ ಬಣಗಳ ನಡುವೆ ನಡೆಯುವ ತಿಕ್ಕಾಟ, ರೌಡಿಯಿಸಂ, ಬ್ಲಾಕ್‌ಮೇಲ್ ತಂತ್ರಗಳು, ಲೈಂಗಿಕ ವೃತ್ತಿ ಸ್ಥಳಕ್ಕೆ ಬಾಸ್‌ಗಳಾದ ಮಹಿಳೆಯರ ದರ್ಪ, ಅಧಿಕಾರ, ಕುಡಿತ, ಗಿರಾಕಿಗಳ ಒರಟುತನ, ಸಹವರ್ತಿಗಳ ಅಸಡ್ಡೆ ಇಂತಹ ಅಡ್ಡೆ ಬದುಕಿನ ರೌದ್ರ ಮುಖಗಳನ್ನು ರೇವತಿ ನಮ್ಮ ಮುಂದೆ ಬಿಚ್ಚಿ ಇಡುತ್ತಾರೆ. ಈ ಬದುಕು ಅಸಹನೀಯ ಎಂದು ಧ್ವನಿಸುವಲ್ಲಿ ನೈತಿಕ- ಅನೈತಿಕ ಎಂಬ ಪ್ರಶ್ನೆಗೆ ಮೀರಿದ ಸಮಾಜದ ಕ್ರೌರ್ಯದ ಮುಖವಿದೆ. ಬಂಡವಾಳಶಾಹಿ ಪ್ರಭುತ್ವದ ಹುನ್ನಾರ ಗಳಿಗೆ ಹಾಗೂ ಪಿತೃಪ್ರಧಾನ ಮೌಲ್ಯಗಳ ತಿಕ್ಕಾಟಕ್ಕೆ ಬಲಿಯಾದ ಚಿತ್ರಣವಿದೆ. ಇಂತಹ ನರಕ ಕೂಪದ ಬದುಕಿನಿಂದ ಈಚೆ ಪರ್ಯಾಯಗಳನ್ನು ಹುಡುಕುವ ಪ್ರಯತ್ನಗಳೂ ಇವೆ.

ಆದರೆ ನಳಿನಿಜಮೀಲರ ನಿಲುವುಗಳೇ ಭಿನ್ನ ವಾದವುಗಳು. ಇವರು ತಮ್ಮ ಖಚಿತವಾದ ಅಭಿಪ್ರಾಯಗಳಿಂದಾಗಿ ಕೇರಳದ ಸ್ತ್ರೀವಾದಿಗಳ ಜೊತೆ ಭಿನ್ನಾಭಿಪ್ರಾಯಗಳನ್ನು ಹೊಂದಿದವರು. 'ಕುಟುಂಬಕೇಂದ್ರಿತ' ಹಾಗೂ 'ಬೌದ್ಧಿಕ' ಮಹಿಳೆಯರ ಟೀಕೆಗಳಿಂದ ವಿಚಲಿತರಾಗದ ತಾವು, ತಮ್ಮನ್ನು 'ಲೈಂಗಿಕ ಕಾರ್ಯಕರ್ತೆಯರ ನಡುವಿನ ಇಂಟಲೆಕ್ಚುಯಲ್' ಎಂದು ಕರೆದುಕೊಂಡುದಾಗಿ ಈಕೆ ಹೇಳುತ್ತಾರೆ. ತಮ್ಮ ಲೈಂಗಿಕ ವೃತ್ತಿಯ ಬಗ್ಗೆ ಜಮೀಲ ಎಂದೂ ಪಶ್ಚಾತ್ತಾಪ ಪಟ್ಟವರಲ್ಲ. ಇದಕ್ಕಾಗಿಯೇ ಇವರು ಕೇರಳದಲ್ಲಿ ಅನೇಕ ಸ್ತ್ರೀವಾದಿ ಹಾಗೂ ಸಾಹಿತಿಗಳಿಂದ ಕಟು ಟೀಕೆಗೆ ಒಳಗಾಗಿದ್ದರೂ 'ವೇಶ್ಯೆ' ಎಂಬ ಪದಕ್ಕೆ, ಈ ಭಾಷೆಯ ಹಿಂದಿನ ಪೂರ್ವಾಗ್ರಹ ಪೀಡಿತ ನಿಲುವುಗಳಿಗೆ ತಮ್ಮದೇ ಸವಾಲುಗಳನ್ನು ಒಡ್ಡಿದರು. ಸಮಾಲೋಚನೆ, ಥೆರಪಿ, ಪ್ರೀತಿಯಂತಹ ಸಂಗತಿಯನ್ನು ಒಳಗೊಂಡ ತಮ್ಮ ಲೈಂಗಿಕ ವೃತ್ತಿಯಲ್ಲಿ

I am ~~Saravanan~~ Vidya



ನಳಿನಿಜಮೀಲ

ಇರುವ ಜ್ಞಾನದ ಪರಿಣತಿಯನ್ನು ಗುರುತಿಸಬೇಕೆಂದು ಇವರು ಒತ್ತಾಯಿಸುತ್ತಾರೆ. ಲೈಂಗಿಕ ಕಾರ್ಯಕರ್ತೆಯರೂ ಕೂಡಾ ಸಂಸಾರ, ಸಂಬಂಧ, ಬಾಂಧವ್ಯ, ಮಕ್ಕಳನ್ನು ಹೊಂದಿರುತ್ತಾರೆ ಎಂಬುದನ್ನು ಸಮಾಜ ಮೊದಲು ಗುರುತಿಸಬೇಕು ಎನ್ನುತ್ತಾರೆ. 'ಲೈಂಗಿಕ ಕಾರ್ಯಕರ್ತೆಯರು ಒಬ್ಬರನ್ನೊಬ್ಬರು ಪ್ರೀತಿಸುವ ಸಾಮೂಹಿಕ ಗೆಳೆಯರನ್ನು ಸೃಷ್ಟಿಸುತ್ತಾರೆಯೇ ಹೊರತು, ಒಬ್ಬರನ್ನೊಬ್ಬರು ಹಿಂಸಿಸುವ ಗಂಡ–ಹೆಂಡತಿಯರನ್ನಲ್ಲ' ಎನ್ನುವ ಇವರು ಲೈಂಗಿಕ ವೃತ್ತಿಯ ಮೂಲಕ ಪಿತೃಪ್ರಧಾನ ಕುಟುಂಬ ವ್ಯವಸ್ಥೆಗೆ ಹಾಗೂ ಬಂಡವಾಳಶಾಹಿ ಸೃಷ್ಟಿಸಿದ ಬಡತನದ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಗೆ ತಮ್ಮ ವಿರೋಧ ವ್ಯಕ್ತಪಡಿಸುತ್ತಾರೆ. ಮೊದಲನೇ ಗಂಡ ಸತ್ತಮೇಲೆ ಮಕ್ಕಳನ್ನು ಸಾಕುವುದಕ್ಕಾಗಿ ಲೈಂಗಿಕವೃತ್ತಿಗೆ ಇಳಿದ ನಳಿನಿಯಿಂದ ಕದ್ದು–ಮುಚ್ಚಿ ಸಹಾಯ ಪಡೆಯುವ ಅತ್ತೆ ತಮ್ಮ ಪರಿಸ್ಥಿತಿ ಸುಧಾರಿಸಿದಾಗ ಆಕೆಯನ್ನು ಕುಟುಂಬದಿಂದ ಹಾಗೂ ಮಕ್ಕಳಿಂದ ದೂರ ಮಾಡುತ್ತಾರೆ. ಹೀಗೆ ಮೊದಲ ಇಬ್ಬರು ಮಕ್ಕಳಿಂದ ದೂರವಾಗುವ ನಳಿನಿ ತಮ್ಮ ವೃತ್ತಿಯ ಪಯಣದಲ್ಲಿ ಭೇಟಿಯಾಗುವ ಮುಸ್ಲಿಮನೊಬ್ಬ ಮದುವೆ ಆಗೆಂದು ಕೇಳಿಕೊಂಡಾಗ ನಳಿನಿ ಜಮೀಲ ಆಗುತ್ತಾರೆ. ಹೆಣ್ಣು ಮಗುವೊಂದರ ತಾಯಿಯಾಗುವ ಈಕೆ ಸಂಬಂಧ ಮುರಿದು ಬಿದ್ದ ಮೇಲೂ ಮಗಳನ್ನು ತಮ್ಮ ಬಳಿಯೇ ಉಳಿಸಿಕೊಳ್ಳುತ್ತಾರೆ. ಮತ್ತೆ ಲೈಂಗಿಕ ವೃತ್ತಿಗೆ ಮರಳುವ ಈಕೆ ಲೈಂಗಿಕ ವೃತ್ತಿಯನ್ನು ಒಂದು ಹಕ್ಕಾಗಿ ಭಾವಿಸಿ ಮುಂದುವರಿಸುತ್ತಾರೆ. ನಾವು ತಪ್ಪು ಮಾಡುತ್ತಿಲ್ಲ ಎಂಬ ಮನಸ್ಥಿತಿಯಿಂದ ಕೆಲಸ ಮಾಡುವ ಈಕೆ ಪರ್ಯಾಯಗಳನ್ನು ಹಾಗೂ ಹೋರಾಟದ ತಂತ್ರಗಳನ್ನು ಲೈಂಗಿಕ ವೃತ್ತಿಯೊಳಗಿನ ಬದಲಾವಣೆಯ ಮೂಲಕ ಬಯಸುತ್ತಾರೆ.

**3. ಐಡೆಂಟಿಟಿ ರಾಜಕೀಯದ ಚಳವಳಿ ಹಾಗೂ ಪರ್ಯಾಯಗಳು**

ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಸಮುದಾಯದ ಅಸ್ತಿತ್ವ ಹಾಗೂ ಐಡೆಂಟಿಟಿಯ ಸುತ್ತ ಅನೇಕ ಚಳವಳಿ, ಹೋರಾಟಗಳು ನಡೆಯುತ್ತಿದ್ದು ಅವುಗಳ ಧ್ವನಿಯನ್ನು ಮುಖ್ಯ ವಾಹಿನಿಯಲ್ಲಿ ಗುರುತಿಸುವ ಪ್ರಯತ್ನಗಳೂ ಕೂಡಾ ನಡೆಯುತ್ತಿವೆ. ಮೂಲೆ ಗುಂಪಾದ ಹಲವು ಸಮುದಾಯಗಳ ಕುರಿತು ಸಾಂಸ್ಕೃತಿಕ ಅಧ್ಯಯನವನ್ನು ನಡೆಸಲು ವಿಶ್ವವಿದ್ಯಾನಿಲಯಗಳು ಧನ ಸಹಾಯವನ್ನೂ ನೀಡುತ್ತಿವೆ. ಸಮುದಾಯದ ಸಾಂಸ್ಕೃತಿಕ ಆಚರಣೆಗಳನ್ನು ವಿಜೃಂಭಿಸುವ ಮೂಲಕ ಸಮುದಾಯದ ಒಳಗೇ ನಡೆಯಬಹುದಾದ ಶೋಷಣೆಯ ಆಯಾಮಗಳನ್ನು ಹತ್ತಿಕ್ಕುವ ಪ್ರಯತ್ನಗಳು, ಹಾಗೂ ಅವರ 'ಹಕ್ಕಿನ' ಹೋರಾಟವನ್ನು 'ಸಬಲತೆಯ' ಆಯಾಮಗಳತ್ತ ತಿರುಗಿಸುವ ಹುನ್ನಾರಗಳೂ ನಡೆಯುತ್ತಿವೆ. ಎಲ್ಲಾ ಚಳವಳಿಗಳೂ ಇಂತಹದರ ಬಗ್ಗೆ ವಿಮರ್ಶಾತ್ಮಕವಾಗಿರುವುದು ಅಗತ್ಯವಾಗುತ್ತದೆ. ಲೈಂಗಿಕ ಕಾರ್ಯಕರ್ತೆಯಾಗಲು ಯಾವ ಕಾರಣಕ್ಕೂ ಇಷ್ಟಪಡದ ವಿದ್ಯಾ ಎನ್.ಜಿ.ಓ ಹಾಗೂ ಫಂಡಿಂಗ್ ರಾಜಕೀಯದಿಂದ ದೂರವೇ ಉಳಿದು ಬಿಡುತ್ತಾರೆ. ಅಲ್ಪ ಸಂಖ್ಯಾತ ಲೈಂಗಿಕ ಸಮುದಾಯದಲ್ಲಿಯೇ ಇದ್ದರೆ ಲೈಂಗಿಕ ವೃತ್ತಿಯನ್ನೇ ಅವಲಂಬಿಸಬೇಕಾಗುತ್ತದೆ ಎಂಬ ಕಾರಣದಿಂದಲೇ ಅಲ್ಲಿಂದ ದೂರ ಸರಿದವರು. ಆದರೆ **'ವಿದ್ಯಾಭ್ಯಾಸದ ಕೊರತೆ, ಕುಟುಂಬದ ಅಲಕ್ಷ್ಯ, ಲೈಂಗಿಕ ಅಲ್ಪಸಂಖ್ಯಾತರ ಬದುಕನ್ನು ಹಸನು ಮಾಡಲು ಪ್ರಭುತ್ವಕ್ಕೆ ಇರುವ ಇಚ್ಛಾಶಕ್ತಿಯ ಕೊರತೆಯಿಂದಾಗಿಯೇ ತಮ್ಮ ಸಮುದಾಯದವರು ಭಿಕ್ಷಾಟನೆ ಹಾಗೂ ಲೈಂಗಿಕ ವೃತ್ತಿಗಳಲ್ಲಿ ಅನಿವಾರ್ಯವಾಗಿ ತೊಡಗುತ್ತಾರೆ'** ಎಂದು ಇವರು ಹೇಳುತ್ತಾರೆ.

ರೇವತಿಯವರ ಆತ್ಮಕತೆಯಲ್ಲಿ ಎನ್.ಜಿ.ಓ. ಬಗ್ಗೆಯಾಗಲೀ ಅಥವಾ ಫಂಡಿಂಗ್ ಬಗ್ಗೆಯಾಗಲೀ ಯಾವ ರಾಜಕೀಯ ನಿಲುವುಗಳೂ ಇಲ್ಲ. ಸಮುದಾಯದ ಹೋರಾಟವನ್ನು ಕಾಲಾಂತರದಲ್ಲಿ ಇಂತಹ ರಾಜಕೀಯಗಳು ಹೇಗೆ ಒಡೆದು ಹಾಕಬಹುದೆಂಬ ಚಿಂತನೆಗಳು ಕೂಡಾ ಇಲ್ಲ. ದೈಹಿಕ ಚಿಹ್ನೆಯಲ್ಲಿ ಹೆಣ್ಣಾಗ ಬಯಸುವಾಗ ಹೆಣ್ತನಗಳನ್ನು ಮೂಗುಬಟ್ಟು, ಬಳೆ, ಅಲಂಕಾರ, ಸೌಂದರ್ಯಗಳಿಂದ ವಿಜೃಂಭಿಸುವುದನ್ನು ಲೈಂಗಿಕ ಅಲ್ಪ ಸಮುದಾಯದವರು ವಿಮರ್ಶಾತ್ಮಕವಾಗಿ ನೋಡಿರುವ ಪ್ರಯತ್ನಗಳು ಎಲ್ಲೂ ದಾಖಲಾಗಿಲ್ಲ. ಬಹುಶಃ ಲೈಂಗಿಕ ವೃತ್ತಿಗೆ ವಯಸ್ಸು ಹಾಗೂ ಸೌಂದರ್ಯ ಮುಖ್ಯ ಎನ್ನುವುದು ವಾಸ್ತವ ಸತ್ಯ ಎಂದು ನಂಬಿರುವ ಸಮುದಾಯದ ಅಭಿಪ್ರಾಯಗಳು ಕೂಡಾ ಇದಕ್ಕೆ ಕಾರಣ ಇರಬಹುದು. ಈಗ ಹೆಚ್.ಐ.ವಿ. ಏಡ್ಸ್‌ಗೆ ಹರಿದುಬರುತ್ತಿರುವ ವಿದೇಶಿ ಹಣ ಲೈಂಗಿಕ ಕಾರ್ಯಕರ್ತೆಯರ ಸಂಕೀರ್ಣ ಸಮಸ್ಯೆಗಳನ್ನು ಹೆಚ್.ಐ.ವಿ. ಏಡ್ಸ್ ಚಳವಳಿಗೆ ಸಮೀಕರಿಸಿದರೆ ಆಶ್ಚರ್ಯವೇನೂ ಇಲ್ಲ. ಸಮುದಾಯದ ಒಳಗೆ ಹಾಗೂ ಹೊರಗೆ ನಡೆಯುತ್ತಿರುವ ಅಲ್ಪಸಂಖ್ಯಾತರ ಮೇಲಿನ ದೌರ್ಜನ್ಯಗಳನ್ನು ಗುರುತಿಸುತ್ತಲೇ, ಎಲ್ಲವನ್ನೂ ಒಳಗೊಳ್ಳುವ ಪ್ರಗತಿಪರ ಚಳವಳಿಯ ಜೊತೆ ನಿರಂತರವಾಗಿ ಒಂದು ಸಂಬಂಧ ರೂಢಿಸಿಕೊಳ್ಳಲು ಐಡೆಂಟಿಟಿ ರಾಜಕೀಯವನ್ನು ಮೀರಿದ ಹರವುಗಳ ವಿಷನ್‌ಅನ್ನು ಹೊಂದಬೇಕಾದ ಅಗತ್ಯವನ್ನು ಎಲ್ಲಾ ಚಳವಳಿಗಳು ಮನಗಾಣಬೇಕಿದೆ.

ನಳಿನಿಜಮೀಲರವರು ಸಂಘಟನೆಯಲ್ಲಿ ಕೆಲಸ ಮಾಡಿದವರಾದರೂ ಮೇಲಿನ ಪ್ರಶ್ನೆಗಳ ಬಗ್ಗೆ ಯಾವುದೇ ವಿಚಾರಗಳನ್ನು ಇವರು ಎತ್ತುವುದಿಲ್ಲ. ಲೈಂಗಿಕ ವೃತ್ತಿಯಲ್ಲಿ ಇರುವ ಅಸಹನೀಯ ಕೆಲಸದ ಸ್ಥಿತಿಗತಿಗಳಿಂದಾಗಿ ತಾನೇ ಬೆಳೆಸಿದ ಮಗಳನ್ನು ಲೈಂಗಿಕ ಕಾರ್ಯಕರ್ತೆಯಾಗಲು ಪ್ರೋತ್ಸಾಹಿಸಲಿಲ್ಲ ಎಂದು ಇವರು ನುಡಿಯುತ್ತಾರೆ. ಇರುವ ಲೈಂಗಿಕವೃತ್ತಿ ವ್ಯವಸ್ಥೆಯೊಳಗೆ ಆಗಬೇಕಾದ ಬದಲಾವಣೆಗಳಲ್ಲಿ ಪರ್ಯಾಯಗಳನ್ನು ಕಾಣುವ ಪ್ರಯತ್ನವನ್ನು ಇವರು ಮಾಡುತ್ತಾರೆ. ಕೇರಳದ ಒಂದು ಎನ್.ಜಿ.ಓ. ಲೈಂಗಿಕ ಕಾರ್ಯಕರ್ತೆಯರಿಗೆ ತರಬೇತಿ ನೀಡುವ ಮೂಲಕ ಬೇರೆ ಬೇರೆ ಉದ್ಯೋಗಗಳಲ್ಲಿ ತೊಡಗಿಸುವ ಪ್ರಯತ್ನ ಮಾಡುತ್ತಿದೆ. ಸರ್ಕಾರ ಮಾಡಿದ ಮರುವಸತಿ ಪ್ರದೇಶಗಳಿಂದ ಹಾಗೂ ಕಾರ್ಯಕ್ರಮಗಳಿಂದ ಬಹಳಜನ ಲೈಂಗಿಕ ಕಾರ್ಯಕರ್ತೆಯರು ಓಡಿಹೋಗಿರುವ ಹಿನ್ನೆಲೆಯಲ್ಲಿ ಲೈಂಗಿಕ ಕಾರ್ಯಕರ್ತೆಯರ ಇಷ್ಟ–ಆಯ್ಕೆಗಳನ್ನು ಪರಿಗಣಿಸುವುದೂ ಮುಖ್ಯ ಎಂಬ ಅಭಿಪ್ರಾಯವೂ ಇದೆ. ಲೈಂಗಿಕ ಕಾರ್ಯಕರ್ತೆಯರಾಗಿ ದುಡಿಯುವ ಬಹುತೇಕ ಮಹಿಳೆಯರು ದಲಿತ ಹಾಗೂ ಕೆಳಜಾತಿಯವರು. ದೇವದಾಸಿ ಕುಟುಂಬಕ್ಕೆ ಸೇರಿದವರೂ ಹೆಚ್ಚು ಮಹಿಳೆಯರಿದ್ದಾರೆ. ಇಂತಹದರಲ್ಲಿ ಲೈಂಗಿಕ ವೃತ್ತಿ ಪ್ರೋತ್ಸಾಹಿಸುವುದು ಈಗಾಗಲೇ ವಾಸ್ತವದಲ್ಲಿ ಇರುವ ಕೆಳಜಾತಿಯ ಹೆಣ್ಣುಮಕ್ಕಳನ್ನು ಬಳಸಿಕೊಳ್ಳುವ ಪ್ರವೃತ್ತಿಯನ್ನು, ವ್ಯವಸ್ಥೆಯನ್ನು ಬಲಪಡಿಸಿದಂತೆ ಆಗುವುದಿಲ್ಲವೇ ಎಂಬ ವಿರೋಧವೂ ಇದೆ. ಕೇರಳದ ಕೆಳಜಾತಿ ಹಾಗೂ ಕೆಳವರ್ಗದಿಂದ ಬಂದ ನಳಿನಿ 'ಅವರವರ ಆಯ್ಕೆಗೆ ಈ ವಿಚಾರವನ್ನು ಬಿಡಬೇಕು' ಎನ್ನುತ್ತಾರೆ. ಇಂದಿನ ಸಂದರ್ಭದಲ್ಲಿ ಇವೆಲ್ಲವುಗಳ ಬಗ್ಗೆ ಚರ್ಚೆ ನಡೆಯುವ ಅಗತ್ಯವಿದೆ. ❑

# ಸಾಲಂಕೃತ ಗುಲಾಮಿ

ಗಂಡುಕೊಂಡು ಕೂಡಿ ಬಳಸಿದ
ಸಾಲಂಕೃತ ಗುಲಾಮಿ
ಭಾಷೆಗೆ ಹುಲಿಯುಗುರು ಕೋರೆಹಲ್ಲು
ಅದೃಶ್ಯದ ನಂಜು
ಮರುಭೂಮಿಯ ಧಗೆ ಅಗ್ನಿಯ
ಹೊಗೆ
ಬೆಟ್ಟದಂತೆ ಅದರ ನೆರಳು
ತುಸು ಬದಲಾದರೂ
ಇಲಿ ಹಿಡಿಯುವ ಬೆಕ್ಕಿನ ಠಕ್ಕು
ಕಾಂಚಾಣದ ಹೆಜ್ಜೆಯ
ಹಣೆಗೊತ್ತಿಕೊಂಡ
ಶೀಲದೆತ್ತರ ಸ್ವಲ್ಪವೂ ಕುಗ್ಗದಂತೆ
ಆಳುವ ಭೋಗಿಸುವ ಸಾವಿರದ
ಸೊಕ್ಕು

ಭಾಷೆಯ ವೀರ್ಯದಿಂದಲೆ
ಆತ ಪಡೆದದ್ದು ಗರ್ಭದ ಸಂಯೋಗ
ಆನಂದದ ಶೃಂಗಸುಖ
ಈಯುವ ಬೇನೆಯ ಅದೇ ಜಾಡಲ್ಲೇ
ಚರಿತ್ರೆ, ಧರ್ಮ, ಶಾಸ್ತ್ರ, ತತ್ತ್ವ, ತರ್ಕ
ರಾಜಕೀಯ ಸಾಹಿತ್ಯ ವಿಜ್ಞಾನದ ಹೆರಿಗೆ
ಹೀಗಾಗಿಯೇ ಗಂಡು
ಸಹಜ ಪ್ರಸವದ ಸೂಲಿಗ

ಭೂತವನು ಬಗೆದು ನೋಡುವ
ವೋಡಿಯ ವೋಹದ ಹಾಸಿನ
ಬೀಸಿನ ತೆರೆದೆದೆಯ ತೋಳಿನ
ಭಾಷೆಯ ಆರೈಕೆಯೊಳಗೆ ದಷ್ಟಪುಷ್ಟ
ವರ್ಣವರ್ಗದ ಲಿಂಗ ಸಂಕರಗೊಂಡ
ಮನ್ವಂತರ

ಕೊಟ್ಟಹಾಗೆ ಮಾಡಿ ಒಂದಕ್ಕೆರಡು ವಸೂಲಿ
ರಕ್ತಬೀಜಾಸುರನ ಶುದ್ಧ ತಳಿ
ಶತಮಾನಗಳ ನಮ್ರತೆಯ ಲಾಂಛನ
ಜನಾಂಗ, ಜಾತಿ 'ನಾನು' ಎನ್ನುವ ಹಮ್ಮು

ಹೆಣ್ಣಿಗಾದರೂ ಭಾಷೆಯೆ ಮೂಲಸೆರೆ
ನಾಲಗೆ ಹೃದಯದ ಇಚ್ಛೆ
ಬಿಟ್ಟು ಹೋಗದೆ ನೆಟ್ಟ ದೃಷ್ಟಿಯಲಿ
ಮೀರುವುದಿದ್ದರೆ ಹೆಣ್ಣೆಂಬ
ಕಾಯವನೆ ಮೀರುವ ಮನಸಿನ ತವಕ
ಬಚ್ಚಿಟ್ಟ ಬಿಡುಗಡೆಯ ಆತ್ಮದ ಗೆಯ್ಮೆ

ಕಾಲನ ಕಾಲ್ಮುರಿಯ ಪದಾತಿ ಪ್ರಾಸದಲಿ
ಸಮಾನತೆಯೆಂಬುದೆ ನಂಬುಗೆಯ ನುಡಿಗಟ್ಟು
ಅದೆಷ್ಟೋ ಸಂವತ್ಸರಗಳ ಸಂಸಾರದ ಸತ್ವ
ಜೀವಭಾವದ ಭವದ ಪಯಣಕ್ಕೆ
ಜೊತೆ ನೀನುಂಟೆ ಎಂಬ
ಶರಣಾಗತಿಯ ಸತ್ಯದ ಹುಡುಕಾಟ

ನಾಯಿಯ ಅಗೆಯುವ ಕೆಲಸ
ಅವ್ವನೆಂದರೆ ಅವ್ವ
ಮಗಳೆಂದರೆ ಮಗಳು
ಮಡದಿಯೆಂದರೆ ಮಡದಿ ಕಟ್ಟಿಕೊಂಡವಳು
ಇಟ್ಟುಕೊಂಡವಳು ಗೆಣೆಗಾರ್ತಿ ಸೂಳೆ ಜೋಗತಿ
ಭಾಷೆಯ ಹಾಸಿನ ಉದ್ದಕ್ಕೂ
ಚಾಚಿದ ಜನ್ಮಜನ್ಮದ ಭಂಗಿ

ಫಲಹೂಡಿ ತಡಕಾಡಿದರೆ
ಹೂತಿಟ್ಟ ಬೀಜವೇ ಮೊಳೆವಂತೆ
ಗಂಡು ಹೆತ್ತ ಭಾಷೆಯ ಒಳಗೆ
ಪಿಂಡದ ಕಾಳ್ಗೆಕ್ಕುವ
ಕಾಗೆಗಳ ಭರ್ರೆಂಬ ಹಾರುವ ಸದ್ದು

■ ಕವಿತಾ ರೈ



# ಬಂಡಾಯದ ಧ್ವನಿ ಕೆ. ಷರೀಫಾ

ಲೇ: ಅನಸೂಯಾ ಕಾಂಬಳೆ

ದಲಿತ-ಬಂಡಾಯ ಸಾಹಿತ್ಯ ಸಂದರ್ಭವನ್ನು ನಾವು ಮುಖ್ಯವಾಗಿ ವೈಚಾರಿಕ ಚಳವಳಿ ಎಂದೇ ಗುರುತಿಸುತ್ತೇವೆ. ಈ ಸಾಹಿತ್ಯ ಚಳವಳಿಯು ಮಹಿಳೆಗೆ ಪುರುಷನೊಂದಿಗೆ ಸಮಾನಾಂತರ ವೇದಿಕೆಯನ್ನು ಕಲ್ಪಿಸಿದೆ. ಮಹಿಳೆಯರಲ್ಲಿ ಆತ್ಮವಿಶ್ವಾಸವನ್ನು ತುಂಬುವ, ಧರ್ಮಸ್ಥಾಪಿತ ಹುಸಿ ಮೌಲ್ಯಗಳ ವಿರುದ್ಧ ವೈಚಾರಿಕ ಮನಸ್ಸುಗಳನ್ನು ಜಾಗೃತಗೊಳಿಸುವ ಕ್ರಿಯೆ ಈ ಚಳವಳಿಯ ಧ್ಯೇಯ. ಜನಕಲಾಮಂಡಳಿ ಹಾಡುಗಳು, ಹೋರಾಟದ ಹಾಡುಗಳು ಜನಪ್ರಿಯವಾಗಿ ಜಡಗೊಂಡ ಮನಸ್ಸುಗಳನ್ನು ತಟ್ಟಿ ಎಚ್ಚರಿಸಿದವು. 'ಹಿಂದಿನ ಜನ್ಮದ ಪಾಪ ಪ್ರಜ್ಞೆಯೇ ತನ್ನ ಸ್ಥಿತಿಗೆ ಕಾರಣ' ಎಂದು ನರಳುವ ಮನಸ್ಥಿತಿಗೆ ಹೊಸ ಆಲೋಚನೆಯನ್ನು ಕೊಟ್ಟವು. ಅದರ ಪರಿಣಾಮವಾಗಿ ಹುಟ್ಟಿಕೊಂಡ ಬರಹಗಾರರ ಮಧ್ಯೆ ಮಹಿಳಾ ಬರಹಗಾರರೂ ಹೋರಾಟದ ಸಾಗರದಲ್ಲಿ ಹನಿಹನಿ ನೀರಾಗಿ ಧುಮ್ಮಿಕ್ಕಿದರು. ಇಂಥ ಪರಿವರ್ತನ ಕಾಲದಲ್ಲಿ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಬರೆಯತೊಡಗಿದವರು ಗುಲ್ಬರ್ಗಾದ ಕೆ. ಷರೀಫಾ.

ಡಾ. ಕೆ. ಷರೀಫಾ ಅವರು 05-05-1957ರಂದು ಗುಲ್ಬರ್ಗಾದಲ್ಲಿ ಜನಿಸಿದರು. ತಂದೆ ಬಾಬು ಮಿಯ್ಯ, ತಾಯಿ ಪುತಲೀ ಬೇಗಂ. ಮನೆಯಲ್ಲಿ ಕಿತ್ತು ತಿನ್ನುವ ಬಡತನ. ಮುಸ್ಲಿಂ ಕುಟುಂಬದಲ್ಲಿ ಹುಟ್ಟಿದ ಷರೀಫಾರು ಬುರಖಾ ಮನಸ್ಥಿತಿಯಿಂದ ಎಚ್ಚೆತ್ತು 'ಸಮುದಾಯ' ಸಂಘಟನೆಯಲ್ಲಿ, ಬಂಡಾಯ ಚಳವಳಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಬರಹಗಾರರಾಗಿ ದಾಖಲಿಸಿಕೊಂಡದ್ದು ಒಂದು ಸಾಹಸಗಾಥೆಯೇ ಸರಿ. ಕಾಲಲ್ಲಿ ಚಪ್ಪಲಿಗಳಿಲ್ಲದೆ, ಸ್ಕೂಲ್‌ಫೀಜು ಕಟ್ಟಲು ದುಡ್ಡಿಲ್ಲದೆ ಶಾಲೆ ಬಿಡುವ ಪ್ರಸಂಗ ಬಂದಾಗ ನೆಚ್ಚಿದ್ದು ಹೊಲಿಗೆ ಯಂತ್ರ. ಕೃಷಿ ಉತ್ಪನ್ನ ಮಾರುಕಟ್ಟೆ (ಎ.ಪಿ.ಎಂ.ಸಿ. ಹರಿಹರ) ಸಮಿತಿಯಲ್ಲಿ ಲೆಕ್ಕಿಗರಾಗಿ ಕೆಲಸಕ್ಕೆ ಸೇರಿದ ನಂತರವೂ ಅವರ ಓದಿನ ಹಸಿವು ನಿಲ್ಲಲಿಲ್ಲ. ಎಂ.ಎ. ಪದವಿ ಪಡೆದು, ಮುಂದೆ 2010ರಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ "ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮುಸ್ಲಿಂ ಮಹಿಳಾ ಸಂವೇದನೆ" ಎಂಬ ಮಹಾಪ್ರಬಂಧವನ್ನು ಸಲ್ಲಿಸಿ ಡಿ.ಲಿಟ್ ಪದವಿಯನ್ನು ಪಡೆದರು. ಈಗ ಹಿರಿಯ ಲೆಕ್ಕ ಪರಿಶೋಧಕರಾಗಿ ಬೆಂಗಳೂರಿನ ಕೇಂದ್ರ ಕಛೇರಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. "ಹೆತ್ತ ತಾಯಿಯ ಪ್ರೀತಿ ಅವರಲ್ಲಿ ಬದುಕುವ ಉತ್ಸಾಹವನ್ನು ಮೂಡಿಸಿದರೆ, ತನ್ನ ಸುತ್ತಲಿನ ಮನಸ್ಸನ್ನು ಜಾಗೃತಗೊಳಿಸಿ ಬರೆಯಲು ಪ್ರೇರೇಪಿಸಿದವು. ಸಮುದಾಯಸಂಘಟನೆ, ಬಂಡಾಯ ಚಳವಳಿ ನನ್ನ ಬದುಕಿನ ಗತಿಯನ್ನೇ ಬದಲಿಸಿದವು, ಎಂದು ತಮ್ಮ ಬರವಣಿಗೆಗೆ ಪ್ರೇರಣೆಯಾದ ಸಂದರ್ಭಗಳನ್ನು ನೆನಪು ಮಾಡಿಕೊಳ್ಳುತ್ತಾರೆ.

ಬಂಡಾಯ ಸಾಹಿತ್ಯ ಚಳವಳಿಯ ಕಿಚ್ಚು ಅವರ ಅಂತಃಶಕ್ತಿಯನ್ನು ಬಡಿದೆಬ್ಬಿಸಿದೆ. ಡಾ. ಕೆ. ಷರೀಫಾ ಅವರು ಒಂದು ಸಮುದಾಯದ ಧ್ವನಿ ಮಾತ್ರ ಅಲ್ಲ. ಮಹಿಳೆಯ ಕಾರ್ಯಕ್ಷೇತ್ರ ಕೇವಲ ಅಡಿಗೆಮನೆ ಎಂದು ಮೂದಲಿಸುವವರಿಗೆ ಸಮಾಜ, ಧರ್ಮ, ಆರ್ಥಿಕತೆ, ರಾಜಕೀಯ, ಜಾಗತೀಕರಣ, ಖಾಸಗೀಕರಣ ಎಲ್ಲದರ ಕುರಿತು ಬರೆದ ಷರೀಫಾರ ಸಾಹಿತ್ಯ ಕೃತಿಗಳ ವಿಮರ್ಶೆ ಬೇರೆ ಆಯಾಮವನ್ನೇ ಕೊಡುತ್ತದೆ.

ತಮ್ಮ ಮೊದಲ ಕವನ ಸಂಕಲನದಿಂದ 1. ಬಿಡುಗಡೆಯ ಕವನಗಳು (1995) 2. ನೂರೇನ್‌ಳ ಅಂತರಂಗ (1997) 3. ಪಾಂಚಾಲಿ (2000-1) 4. ಮುಮ್ತಾಜಳ ಮಹಲು(2001) 5. ಬಂಡಾಯ ಮುಸ್ಲಿಂ ಸಂವೇದನೆ (2004) ವಿಮರ್ಶೆ- 6. ಬುರ್ಖಾ ಪ್ಯಾರಾಡೈಸ್ (2009) 7. ಮಹಿಳಾ ಮಾರ್ಗ: ಗೀತಾ ನಾಗಭೂಷಣ (2010) ಕೃತಿ ಸಂಪಾದನೆವರೆಗೆ ಷರೀಫರ ಸಾಹಿತ್ಯಿಕ ದಾರಿ ಸುಲಭದ್ದೇನಲ್ಲ. ಧರ್ಮಾಂಧ ಕುಹಕ ಮಾತುಗಳಿಗೆ ಉತ್ತರಿಸುತ್ತಲೇ ಶ್ರೀ ಬಿ.ಎಂ. ಹನೀಫರು ಗುರುತಿಸುವಂತೆ "ತಮ್ಮ ಮೊದಲ ಸಂಕಲನದಲ್ಲೆ ಭರವಸೆ ಹುಟ್ಟಿಸುವ ಕೆ. ಷರೀಫಾ ಅವರ ಕವಿತೆಗಳನ್ನು ಎರಡು ವಿಭಿನ್ನ ನೆಲೆಗಳಲ್ಲಿ ವಿಭಾಗಿಸಬಹುದು. ಒಂದು, ಹೆಣ್ಣಿನ ಸಂಕಟಕ್ಕೆ ಸಂಬಂಧಿಸಿ ಹುಟ್ಟಿದ ತೀವ್ರ ಪ್ರತಿಕ್ರಿಯಾತ್ಮಕ ಕವನಗಳು. ಇನ್ನೊಂದು, ಸಾಮಾಜಿಕ ವರ್ಗ ಹಿನ್ನೆಲೆಯಲ್ಲಿ ಹುಟ್ಟಿದ ಸಮಾಜಮುಖಿ ಕವನಗಳು." ಹೀಗಾಗಿ ಷರೀಫಾ ಅವರನ್ನು ಕೇವಲ ಮುಸ್ಲಿಂ ಸಂವೇದನೆಯುಳ್ಳ ಲೇಖಕಿ ಎಂದು ಗುರುತಿಸಿದರೆ ತಪ್ಪಾಗುತ್ತದೆ. ಯಾವುದೇ ಒಬ್ಬ ಸೃಜನಶೀಲ ಕವಿ-ಲೇಖಕ ತನ್ನ ಒತ್ತಾಯದ ಹೇರಿಕೆಯಾದ ಜಾತಿ-ಧರ್ಮವನ್ನು ಮೀರಿ ವಿಶ್ವಭ್ರಾತೃತ್ವದ ತತ್ತ್ವವನ್ನು ಮೆರೆಯುತ್ತಾನೆ/ಳೆ. ಅಂಥ ಸಾಧ್ಯತೆಯನ್ನು ತನ್ನದಾಗಿಸಿಕೊಂಡ ಕೆ. ಷರೀಫಾರಿಗೆ ಶೋಷಿತ ವರ್ಗದ ಧ್ವನಿಯಾಗಲು ಸಾಧ್ಯವಾಗಿದೆ.

'ಜೋಸ್ನಿಯಾದ
ಕ್ರೂರ ಬದುಕುಗಳು
ಸೋಮಾಲಿಯದ
ಅಸ್ಥಿ ಪಂಜರಗಳು
ರಾಮನಾಮದಡಿಯಲಿ
ಚೂರಿ ಇರಿತಕ್ಕೆ ಸಿಕ್ಕು
ವಿಲಿವಿಲಿ ಒದ್ದಾಡಿ
ರಕ್ತದ ಮಡುವಿನಲ್ಲಿ
ಬಿದ್ದ ಭಾರತೀಯರ
ಕನಸುಗಳು' *(ಆ ಶವಗಳು: ಬಿಡುಗಡೆಯ ಕವನಗಳು)*

ರಾಷ್ಟ್ರೀಯ-ಅಂತರರಾಷ್ಟ್ರೀಯ ವಿದ್ಯಮಾನ, ನೋವು-ಸಂಕಟಗಳನ್ನು ದಾಖಲಿಸುವ ಕವಯಿತ್ರಿ ಧರ್ಮಪ್ರೇರಿತ ಹಿಂಸೆಯನ್ನು ಖಂಡಿಸುತ್ತಾರೆ. ಮನುಕುಲದ ಒಳಿತಿಗಾಗಿ ಹೋರಾಡಿದ ನೆಲ್ಸನ್ ಮಂಡೇಲಾ, ಬೆಂಜಮಿನ್ ಮೊಲಾಯಿಸ್, ಗಾಂಧೀ, ಅಂಬೇಡ್ಕರ್ ಅವರುಗಳ ಹೋರಾಟಗಳನ್ನು ಸಾಕ್ಷೀಕರಿಸುತ್ತಲೇ ಸಮಾನತೆಗಾಗಿ, ಮಾನವತೆಗಾಗಿ ಹಾತೊರೆಯುವ ಮನಸ್ಸುಗಳ ಸೃಷ್ಟಿಕ್ರಿಯೆಯಲ್ಲಿ ತೊಡಗುತ್ತಾರೆ.

ಜಾಗತಿಕ ಸಂಗತಿಗಳನ್ನು ಬಹಳ ಎಚ್ಚರಗಣ್ಣಿನಿಂದ ವೀಕ್ಷಿಸುವ ಷರೀಫಾರು 'ನೂರೇನ್‌ಳ ಅಂತರಂಗ' ಕವನ ಸಂಕಲನದಲ್ಲಿ ಗ್ಯಾಟ್, ಡೆಂಕಲ್‌ದಂಥ ಬಹುರಾಷ್ಟ್ರೀಯ ಕಂಪನಿಗಳೊಡನೆ ಮಾಡಿಕೊಂಡ ಒಪ್ಪಂದಗಳನ್ನು ಖಂಡಿಸುತ್ತಾರೆ.

"ವಿದೇಶಿ ಬಂಡವಾಳಿಗರ
ಸೆಳೆಯಲು ಹೆಣ್ಣೋರ್ವಳ
ಹೂನಗೆಯ ಹೊತ್ತು
ಸುಸಂಸ್ಕೃತಿಯ ಮುಸುಕಿನಲಿ
ಮುಗುಳ್ನಗೆಯ ಸ್ವಾಗತ"

ಹೆಣ್ಣಿಗೆ ಧಾರ್ಮಿಕ ದಿಗ್ಬಂಧನಗಳು ಒಂದೆಡೆಯಿದ್ದರೆ, ಇಂದಿನ ಮಾರುಕಟ್ಟೆ ಕೇಂದ್ರಿತ ಸರಕು ಸಂಸ್ಕೃತಿಯಲ್ಲಿ ಹೆಣ್ಣಿಗೆ ಒದಗಿ ಬಂದ ಹೊಸ ಸಂಕಟಗಳು ಬೇರೆ. ಹೆಣ್ಣು ಹೇಗೆ ಮುಗುಳು ನಗೆ ಹೊತ್ತು ಎದುರಿಸಬೇಕಾಗಿದೆ ಎಂಬುದು ಸೌಂದರ್ಯದ ಹಿಂದಿನ ಕ್ರೌರ್ಯವನ್ನು ಅನಾವರಣಗೊಳಿಸುವ ಅದ್ಭುತ ಬಗೆ. ಖ್ಯಾತ ಕ್ರಿಕೆಟ್ ತಾರೆ ಅಜರುದ್ದೀನ್ ಅವರ ಪತ್ನಿ ನೂರೇನ್‌ಳ ಧ್ವನಿಯಾಗಿ 'ತಲಾಖ್' ಸಂಸ್ಕೃತಿಯ ಭೀಕರತೆ ಹಾಗೂ ಹೆಣ್ಣಿನ ಅಸ್ತಿತ್ವವನ್ನು ಅಲ್ಲಗಳೆಯುವ ಧಾರ್ಮಿಕ ಹೇರಿಕೆಯನ್ನು ಪ್ರತಿಭಟಿಸುತ್ತಾರೆ.

"ಜೂಜಿನ ವಸ್ತುವಾಗಿ
ಪಣಕ್ಕಿಟ್ಟ ಪಾಂಚಾಲಿ
ಅವಮಾನದ ಬೆಂಕಿಯಲಿ
ಬೆಂದು ಹೋಗುವಂತೆ
ದಹಿಸಿ ಹೋಗಲಾರೆ
ಯಾರದೋ ವಸ್ತುವಾಗುವ
ಬದಲು ಲೋಕದಲಿ ನನ್ನ
ಅಸ್ತಿತ್ವ ಹುಡುಕುತಲಿರುವೆ" *(ಪಾಂಚಾಲಿ)*

ಹೆಣ್ಣಿನ ಅಸ್ತಿತ್ವದ ಹುಡುಕಾಟ ಇಲ್ಲಿ ಕೇಂದ್ರ ಪ್ರಜ್ಞೆಯಾಗಿ ಕಾಡಿದೆ-ಕಂಗೆಡಿಸಿದೆ. ಪುರಾಣ ಪ್ರಸಿದ್ಧ ಪತಿವ್ರತೆಯರಾದ ಸೀತೆ, ಸಾವಿತ್ರಿ, ದ್ರೌಪದಿ, ಶಕುಂತಲೆ, ಚಂದ್ರಮತಿ, ಅಹಲ್ಯೆಯರು ಇಂದಿನ ಆಧುನಿಕ ಮಹಿಳೆಯರಿಗೆ ಪ್ರಶ್ನೆಗಳಾಗಿ ಕಾಡಿದ್ದಾರೆ. ಹೀಗಾಗಿ ಈ ಪುರಾಣ ಹಾಗೂ ಕಾವ್ಯಪ್ರಸಿದ್ಧ ನಾಯಕಿಯರೆಲ್ಲ ಇಂದಿನ ಮಹಿಳಾ ಮಾದರಿಗಳಲ್ಲ. ಇಲ್ಲಿ ಅಸ್ತಿತ್ವದ ಹುಡುಕಾಟವೆಂಬುದು ಪುರಾಣಭಂಜಕತೆಯೇ ಆಗಿದೆ. ಅವಮಾನಿಸುವ ಕ್ರಿಯೆ ಹೆಣ್ಣು ಬೆಳಕಿಗೆ ಬರುವುದನ್ನು ತಡೆಯುವುದೇ ಆಗಿದೆ. ಹೀಗಾಗಿ ಈ 'ಪಂಚಾಲಿ' ಸಂಕಲನ ಹೊಸ ಹೊಳಹುಗಳನ್ನು ಕೊಡುವುದರ ಮೂಲಕ ಪ್ರತಿಭಟನಾ ಮಾದರಿಯೊಂದನ್ನು ತೆರೆದಿಡುತ್ತದೆ.

"ಕಳೆದ ಇಪ್ಪತ್ತೈದು ವರ್ಷಗಳಿಂದಲೂ ಬರವಣಿಗೆಯನ್ನು ರೂಢಿಸಿಕೊಂಡ ನನಗೆ ಅನೇಕ ಕ್ಷೇತ್ರಗಳು ಆಕರ್ಷಿಸಿವೆ. ಅವುಗಳಲ್ಲಿ ಸ್ತ್ರೀಪರ ಚಳವಳಿಗಳು, ಬಂಡಾಯ ಸಾಹಿತ್ಯ ಮುಖ್ಯವಾಗಿವೆ. 70ರ ದಶಕದಿಂದೀಚೆಗೆ ಕರ್ನಾಟಕದಲ್ಲಿ ನಡೆದ ಸಂಘರ್ಷಮಯ ಸಾಂಸ್ಕೃತಿಕ ಹೋರಾಟಗಳೊಂದಿಗೆ ಸ್ತ್ರೀಪರವಾದ ಕ್ಷೀಣಧ್ವನಿಗೆ ನನ್ನ ಧ್ವನಿಯನ್ನು ಸ್ವಲ್ಪ ಸೇರಿಸುವೆ" ಎಂದು "ಮುಮ್ತಾಜಳ ಮಹಲು" ಕವನ ಸಂಕಲನದ ಮುನ್ನುಡಿಯಲ್ಲಿ ಹೇಳಿಕೊಂಡಿರುವ ಷರೀಫಾರು ಸಂಕಲನದ ಶೀರ್ಷಿಕೆ ಕವಿತೆಯಲ್ಲಿಯೇ ಬಹಳ ಗಂಭೀರವಾದ ಪ್ರಶ್ನೆಯನ್ನು ಎತ್ತುತ್ತಾರೆ. ಲೋಕದ ಕಣ್ಣಿಗೆ 'ಪ್ರೇಮದ ಕಾಣಿಕೆ'ಯಾಗಿ ಕಾಣುವ 'ತಾಜಮಹಲು' ಹೆಣ್ಣಿನ ಬಲಿದಾನದ ಕುರುಹಾಗಿ ಕಂಡಿದೆ. ಅದು ತನ್ನ ಒಡಲೊಳಗೆ ಹುದುಗಿಕೊಂಡಿರುವ ಹಸಿ ಸತ್ಯಗಳ ಅನಾವರಣ ಮಾಡುತ್ತಾರೆ. ಅಲ್ಲದೆ 12ನೇ ಶತಮಾನದ ಅಕ್ಕ ಮಹಾದೇವಿ ಕೇವಲ ಆದರ್ಶವಾಗದೆ ಎಚ್ಚರದ ಧ್ವನಿಯಾಗಿ ಕವಯಿತ್ರಿಯನ್ನು ಕಾಡಿದ್ದಾಳೆ. ಒಟ್ಟು ಇಲ್ಲಿರುವ ನಲವತ್ತೂರು ಕವಿತೆಗಳು ಲೋಕದ ಸಂಕಟಗಳಿಗೆ ಧ್ವನಿಯಾಗಿ ಮಾತಾಡಿವೆ. ಉದಾರೀಕರಣದಂತಹ ಕಠಿಣ ವಿಷಯವನ್ನು ಕಾವ್ಯವಾಗಿಸಿದ್ದು ಸೋಜಿಗ ಹುಟ್ಟಿಸುತ್ತದೆ.

ಕೆ. ಷರೀಫಾರು ಕವಯಿತ್ರಿಯಾಗಿ ಗಮನ ಸೆಳೆದಂತೆ ವಿಮರ್ಶಾ ಕ್ಷೇತ್ರದಲ್ಲೂ ಹೆಜ್ಜೆ ಮೂಡಿಸಿದ್ದನ್ನು "ಬಂಡಾಯ: ಮುಸ್ಲಿಂ ಸಂವೇದನೆ" ಕೃತಿಯ ಮೂಲಕ ಕಾಣಬಹುದಾಗಿದೆ. ಸಮಕಾಲೀನ ಮುಸ್ಲಿಂ ಬರಹಗಾರರ ಕೃತಿಗಳನ್ನು ಬಹು ಸೂಕ್ಷ್ಮವಾಗಿ ಗಮನಿಸಿರುವ ಷರೀಫಾರು ಮೊದಲ ತಲೆಮಾರಿನ ಬರಹಗಾರರಿಂದ ಹಿಡಿದು ಇಂದಿನ ಹೊಸ ತಲೆಮಾರಿನ ಮುಸ್ಲಿಂ ಬರಹಗಾರರನ್ನು ಗುರುತಿಸಿ, ಅವರ ಕೃತಿಗಳನ್ನು ಅಧ್ಯಯನ ಮಾಡಿ, ಹನ್ನೆರಡು ಲೇಖನಗಳಲ್ಲಿ ಮುಸ್ಲಿಂ ಸಂವೇದನೆಯನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಮುಸ್ಲಿಂ ಮಹಿಳೆಯ ತಲ್ಲಣಗಳು, ಸಂದಿಗ್ಧತೆಗಳು, ಬದಲಾಗುತ್ತಿರುವ ಸಂದರ್ಭ, ಮಹಿಳಾ ವಿಮೋಚನೆಯ ಸವಾಲುಗಳು ಮುಂತಾದ ವಿಷಯಗಳನ್ನಿಟ್ಟುಕೊಂಡು ವಿವೇಚನೆ ನಡೆಸಿರುವ ಷರೀಫಾ ವಸ್ತುನಿಷ್ಠವಾಗಿ ವಿಮರ್ಶೆ ಮಾಡಿದ್ದಾರೆ. ಇದು ಒಂದು ಉತ್ತಮ ಆಕರ ಗ್ರಂಥವಾಗಿ ಮಹತ್ವ ಪಡೆದಿದೆ. ಡಾ. ಷರೀಫಾರ ಅಧ್ಯಯನ ದೃಷ್ಟಿಯನ್ನು ಸಾಬೀತು ಪಡಿಸುವ ಕೃತಿ ಇದಾಗಿದೆ.

ಲಡಾಯಿ ಪ್ರಕಾಶನದ ಬಸವರಾಜ ಸೂಳಿಬಾವಿ ಅವರೊಂದಿಗೆ ಸಹಸಂಪಾದಕರಾಗಿ ಸಂಪಾದಿಸಿದ "ಮಹಿಳಾ ಮಾರ್ಗ: ಶ್ರೀಮತಿ ಗೀತಾ ನಾಗಭೂಷಣ" ಕೃತಿಗೆ ಬರೆದ ಪ್ರಸ್ತಾವನೆಯು ಒಂದು ಪ್ರಬುದ್ಧ ಬರಹವಾಗಿದ್ದು, ದಲಿತ ಮಹಿಳಾವಾದ ಹಾಗೂ ದಲಿತ ಮಹಿಳಾ ಬರಹದ ವಿಮರ್ಶನ ವಿಧಾನಗಳ ಹೊಳಹುಗಳನ್ನು ನೀಡುತ್ತದೆ. ಅಲ್ಲಿಯ ಲೇಖನಗಳ ಆಯ್ಕೆ ಮಹತ್ವದ್ದಾಗಿದೆ.

ಇತ್ತೀಚೆಗೆ ಬಂದ "ಬುರ್ಖಾ ಪ್ಯಾರಡೈಸ್" ಕವನ ಸಂಕಲನ ಡಾ. ಷರೀಫರ ಕಾವ್ಯದೃಷ್ಟಿಯನ್ನು ವಿಸ್ತರಿಸಿದ ಕೃತಿಯಾಗಿ ಮಹತ್ವದ್ದಾಗಿದೆ. ಕಾವ್ಯ ಹುಟ್ಟುವಾಗಿನ ಸಂಕಟವನ್ನು ತಾಯಿಯ ವೇದನೆಯಲ್ಲಿ ಪ್ರಸ್ತುತ ಪಡಿಸುತ್ತ,

ದುಃಖದ ಭಾರ ಹೆಚ್ಚಾದಾಗ
ನೋವಿನ ಬೆಂಕಿ ಹೊತ್ತಿದಾಗ
ಬೆನ್ನ ಹುರಿಯಲ್ಲಿ ಸಂಕಟ

**ಹುರಿಗೊಂಡು ಮುತ್ತಿದಾಗ**
**ಎದೆಯೊಳಗಿನ ತಳಮಳ**
**ಸ್ಫೋಟಕ ಹಂತ ತಲುಪಿದಾಗ**
**ಹಾಡು ಮಗಳೇ ಮನಬಿಚ್ಚಿ** *(ಹಾಡು ಮಗಳೆ)*

ಎನ್ನುವಲ್ಲಿ ಡಾ. ಸಿದ್ಧಲಿಂಗಯ್ಯ ಅವರ ಕಾವ್ಯ "ಅವರ ಬಾಯಿ ತೆರೆಯಲು ಇವರ ಬಾಯಿ ಮುಚ್ಚಿತು" ಎಂದು ಶತಶತಮಾನದಿಂದ ಮೂಕಜನರ ಮೌನ ಸ್ಫೋಟವಾದ ಸಂದರ್ಭವೊಂದನ್ನು ಅವರ ಪ್ರತಿಭಟನೆಯಲ್ಲಿ ದಾಖಲಿಸುವಂತೆ, ಸಂಕಟದಲಿ ಹುಟ್ಟುವ ಕಾವ್ಯ ಸಂಭ್ರಮವಾಗದೆ ಪ್ರತಿರೋಧದ ಧ್ವನಿಯಾಗಿ ಗರ್ಜಿಸುವುದನ್ನು ಹಾಗೂ ಬದಲಾವಣೆಯ ಆಶಯವಾಗುವುದನ್ನು ಸಂಕೇತಿಸುತ್ತದೆ.

ಅವರ 'ಗಡಿ ಮತ್ತು ಕಾವ್ಯ' ಎಲ್ಲ ಸರಹದ್ದು ಗಡಿಗಳನ್ನು ಮೀರಿ ಕವಿ ಮತ್ತು ಮನಸ್ಸು ಬೆಳೆಯಬೇಕಾದ ವಿಶ್ವಮಾನವ ತತ್ತ್ವವನ್ನು ನಿರೂಪಿಸಿದೆ. ಯುದ್ಧವಿರೋಧಿ ಕಾವ್ಯ ಮಾನವತ್ವದ ಬೆಸುಗೆಯಾಗುವ, ಬಂದೂಕು-ರಕ್ತಪಾತವಿಲ್ಲದ ಕ್ರಾಂತಿಯಾಗುವ ಮನಸ್ಸುಗಳು ಬಾಂಬು ಸಂಸ್ಕೃತಿಯನ್ನು ವಿರೋಧಿಸುತ್ತಲೆ ಹಾಡಿನ ಗೂಡಾಗುವ ಚಿತ್ರಕ ಶಕ್ತಿಯನ್ನು ಪಡೆದುಕೊಳ್ಳುತ್ತದೆ. 'ಜಿಹಾದ್ ಎಂದರೆ ಹಿಂಸೆಯಲ್ಲ, ಭೂಮಿ' ಎಂದು ಹೊಸಭಾಷ್ಯ ಬರೆದಿದ್ದಾರೆ.

**"ಭೂಮಿ ಎದೆ ಬಿರಿಯುವಂತೆ ರೋದಿಸಿದ**
**ಗುಡಿಯಾಳ ಆರ್ತಬಿಕ್ಕುಗಳ ಶಬ್ದ**
**ತಟ್ಟಲೇ ಇಲ್ಲ ಜಮಾತಿನ ಹೃದಯಕೆ**
**ಭೂಮಿ ಆಗಸಕೆ, ತಾಯಿ ಮಗುವಿಗೆ**
**ಹಾಕಬಹುದೇ ಪಂಚಾಯ್ತಿಗಳು ಬಹಿಷ್ಕಾರ?"** *(ಗುಡಿಯಾ)*

ದೇಶಕ್ಕೆ ಸ್ವಾತಂತ್ರ್ಯ ಬಂದು ಪ್ರಜಾಪ್ರಭುತ್ವ ವ್ಯವಸ್ಥೆ ಜಾರಿಯಲ್ಲಿದ್ದಾಗಲೂ ಧರ್ಮ ಮತ್ತು ಜಾತಿ ಪಂಚಾಯ್ತಿಗಳು ಹೆಣ್ಣಿನ ಶೋಷಣೆಗೆ ಕಾರಣವಾಗಿದ್ದು ದೇಶದ ನ್ಯಾಯಾಂಗ ವ್ಯವಸ್ಥೆಯನ್ನು ಅಪಮಾನಿಸುತ್ತಲೇ ಬಂದಿವೆ. ಇದನ್ನು ಪ್ರಶ್ನಿಸುವ ಕವಿಯತ್ರಿ ಹೆಣ್ಣು ತನ್ನ ನಿರ್ಧಾರವನ್ನು ಹೇಳುವಂತಹ ಮುಕ್ತ ವಾತಾವರಣ ನಿರ್ಮಾಣವಾಗಬೇಕೆಂದು ಬಯಸುತ್ತಾರೆ.

ಹೀಗೆ ಕನ್ನಡದ ಪ್ರಜ್ಞಾವಂತ ಕವಿಯತ್ರಿಯಾದ ಕೆ. ಷರೀಫಾರ ಕವಿತೆಗಳಿಗೆ ಬಹುಮುಖಿ ಆಯಾಮಗಳಿವೆ. ದೇಶದ-ಜಾಗತಿಕ ವಿದ್ಯಮಾನಗಳನ್ನು ಕವಿತೆಯಾಗಿಸುವ ಛಾತಿ ಹೊಂದಿರುವ ಕವಿಯತ್ರಿಯ ಮನಸ್ಸು ಕೇವಲ ಮಹಿಳಾ ಸಮಸ್ಯೆಗಳಿಗೆ ಮಾತ್ರ ಸೀಮಿತವಾಗಿಲ್ಲ. ಬುರ್ಖಾ ಧರಿಸಿದ ಮಹಿಳೆಯಿಂದ ಇಂದಿನ ಜಾಗತೀಕರಣದ ಸಂದಿಗ್ಧತೆಯಲ್ಲಿ ಬಿಕರಿಗಿಟ್ಟ ಮಹಿಳೆಯರವರೆಗೂ ಕಾವ್ಯ ವ್ಯಾಪಿಸಿದೆ. ಡಾ. ಸರಜೂ ಕಾಟ್ಕರ್ ಅವರು ಗುರುತಿಸಿರುವಂತೆ- "ಬಂಡಾಯ ಸಾಹಿತ್ಯ ಕನ್ನಡಕ್ಕೆ ನೀಡಿದ ಅನೇಕ ಪ್ರತಿಭೆಗಳಲ್ಲಿ ಕೆ.ಷರೀಫಾರ ಹೆಸರು ಮೇಲ್ಮಟ್ಟದ್ದು. ಷರೀಫಾ ಬಂಡಾಯ ಸಂಘಟನೆಯಲ್ಲಿದ್ದರೂ ಅವರ ಸಾಹಿತ್ಯ ಅದರಾಚೆಗೂ ಮೈಚಾಚಿ, ಬದುಕಿಗೆ ಇಡಿಯಾಗಿ ಸ್ಪಂದಿಸ ಬಯಸುವ ಬಹುಮುಖಿ ಪ್ರಜ್ಞೆಯುಳ್ಳದ್ದಾಗಿದೆ. ಅತ್ಯಂತ ಜಟಿಲವಾದ ಸಾಮಾಜಿಕ ಸ್ಥಿತ್ಯಂತರ ಗಳನ್ನು ಅನಾಯಾಸವಾಗಿ ಹಿಡಿದಿಡುವ ಶಕ್ತಿ ಷರೀಫಾ ಅವರ ಕಾವ್ಯಕ್ಕಿದೆ."

ಮಾನವತಾವಾದವನ್ನೇ ತನ್ನ ಅಂತಃಸತ್ವವಾಗಿಸಿಕೊಂಡು ಬರೆಯುತ್ತಿರುವ ಕವಯಿತ್ರಿ ಇನ್ನಷ್ಟು ಕನ್ನಡ ಸಾಹಿತ್ಯಕ್ಕೆ ತನ್ನ ಕೊಡುಗೆ ನೀಡಲಿ. ❑



# ಆತಾಳ ಪಾತಾಳ

ಸಮುದ್ರಕೆ ಪಾತಾಳ
ಮರಳುಗಾಡಿಗೆ ಪಾತಾಳ
ಭೂಮಿಗೆ ಪಾತಾಳಗಳಿದ್ದಿರಬಹುದಾದರೆ
ಆಕಾಶಕೂ ಪಾತಾಳ...
ಹೆಕ್ಕಿದಷ್ಟು ಅದರೊಳಗೆ ಹೊಕ್ಕಷ್ಟು
ಹೂತು ಹೋಗುವ ಅವುಚಿಕೊಳ್ಳುವ
ನಕ್ಷತ್ರ ನಕ್ಷತ್ರಗಳ ಲೋಕ

ಇನ್ನೂ ಆಳ ಆಳ ಆತಾಳ ಪಾತಾಳ
ಏನೋ ಯಾವುದಕ್ಕೋ ಹುಡುಕಾಟ
ಇವೆ ಇವೆ ನಮ್ಮೆದೆಯೊಳಗೂ ಆಳ ಪಾತಾಳಗಳು
ಅದರೊಳಗೆ ಬೆಂಕಿ ಜ್ವಾಲೆಗಳ ಪರ್ವತಗಳು
ಭೋರ್ಗರೆವ ಜಲಪಾತಗಳು
ಉಕ್ಕುವ ಸುನಾಮಿಗಳು

ನೆನಪಿರಲಿ ಮುತ್ತು, ರತ್ನ, ಹವಳ
ಕಠೋರ ವಜ್ರಗಳೂ ಕೂಡಾ
ಮೇಲೆ ಮೇಲೆ ನೀರು ನಕ್ಷತ್ರಗಳಿದ್ದರೇನು
ಮರಳು ಹಿಮವಿದ್ದರೇನು
ಮನದಾಳಕಿಳಿದು ಶೋಧಿಸುವ
ಗರಡಿ ಇಲ್ಲದಿರೆ, ಆತಾಳ ಪಾತಾಳ ಮೌನ

ಆಗಬಹುದು ಒಂದಲ್ಲ ಒಂದು ಸಲ
ಉಲ್ಕಾಪಾತ, ಸುನಾಮಿ ಜ್ವಾಲಾಮುಖಿ
ಪಾತಾಳ ಮೇಲೆ ಭೂಮಿ ಒಳಗೆ
ಮರಳು ಒಳಗೆ ತೈಲಮೇಲೆ
ಸಮುದ್ರರಾಜ ಒಳಗೆ ಸಂಪತ್ತು ಮೇಲೆ
ಶಕ್ತಿದೇವತೆ ಮೇಲೆ ಕಾಲಕೆಳಗೆ ರಾಕ್ಷಸ

■ **ಡಾ. ಲತಾಗುತ್ತಿ**




# ಬಿದಿರಿನ ಬುಟ್ಟಿ

■ ಊರ್ಮಿಳಾ ಪವಾರ್

*ಅನು: ಮಂಗ್ಳೂರ ವಿಜಯ*

*(ಹಿಂದಿನ ಸಂಚಿಕೆಯಿಂದ)*

ಎರಡೇ ದಿನಗಳ ಬಳಿಕ ನಾನು ಮತ್ತು ರಾವೂತ್ ಗಿರಗಾಂವ್‌ಗೆ ಹೋದೆವು. 'ನವಕಾಲ' ಎಂಬ ಪತ್ರಿಕೆಯ ಸಂಪಾದಕೀಯ ವಿಭಾಗದಲ್ಲಿನ ಚಿಕ್ಕ ಕ್ಯಾಬಿನ್ ಒಂದರಲ್ಲಿ ಕುಳಿತಿದ್ದ ಬಾರಸ್ಕರ್‌ರನ್ನು ನಾವು ಭೇಟಿಯಾದೆವು. ಕಥೆ ಬರೆಯುವ ಬಗ್ಗೆ ಅವರು ಕೇಳಿದಾಗ, ನನಗೆ ತಿಳಿದದ್ದನ್ನು ಹೇಳಿದೆ. ಇದಕ್ಕೆ ಅವರು "ನಿಮಗೆ ಚರ್ಚ್ ಗೇಟ್ ಕಡೆಗೆ ಹೋಗಬೇಕಾ; ವಿ.ಟಿ ಕಡೆ ಹೋಗಬೇಕಾ?" ಇದನ್ನು ನಿರ್ಧಾರ ಮಾಡಿಕೊಳ್ಳಿ ಎಂದರು. 'ನನ್ನ ಕಥಾ ಬರವಣಿಗೆಗೆ ಈ ಜಾಗಗಳಿಗೆ ಹೋಗಬೇಕೇಕೆ?" ಎಂಬ ಪ್ರಶ್ನೆ ಮೂಡಿತು. ಅಷ್ಟರಲ್ಲಿ ಅವರು 'ಕಥೆಯ ಅಂತ್ಯವನ್ನು ಮೊದಲೇ ನಿರ್ಧರಿಸಿ, ಆ ಕಡೆ ಕಥೆಯ ಬೆಳವಣಿಗೆಯನ್ನು ಹೆಣೆಯುವುದು ಒಂದು ರೀತಿ; ಹೀಗಲ್ಲದೆ ಕಥೆ ತನ್ನ ಅಂತ್ಯವನ್ನು ತಾನೇ ಹುಡುಕಿಕೊಳ್ಳಲು ಅವಕಾಶ ಒದಗಿಸುವುದು ಇನ್ನೊಂದು ರೀತಿ. ನೀವು ಕಥೆ ಬರೆಯಲು ಪ್ರಾರಂಭಿಸುವಾಗ ಯಾವ ರೀತಿಯನ್ನು ಅನುಸರಿಸುತ್ತೀರಿ ಎಂಬುದನ್ನು ನಿರ್ಧರಿಸಿ' ಎಂದು ಬಾರಸ್ಕರ್ ಸಲಹೆ ನೀಡಿದರು.

'ಸತ್ಯಕಥಾ' ಕಥೆಗಳನ್ನು ಓದಿದ್ದೀರಾ? ಎಂಬ ಪ್ರಶ್ನೆ ಬಾರಸ್ಕರ್ ಕಡೆಯಿಂದ ಬಂದಾಗ, ನನಗೆ ಒಂದೂ ತಿಳಿಯಲಿಲ್ಲ. 'ಸತ್ಯಕಥೆ' ಎಂಬುದೊಂದು ಪತ್ರಿಕೆ ಇದೆಯೆಂದೂ ನನಗೆ ತಿಳಿದಿರಲಿಲ್ಲ. ಬಾರಸ್ಕರ್ 'ಸತ್ಯಕಥೆ'ಯಲ್ಲಿ ಕಥೆ ಪ್ರಕಟವಾದರೆ ಅದೊಂದು ಮಹಾ ಗೌರವ" ಎಂದರು. ಇಂಥ ಎಷ್ಟೋ ವಿಷಯಗಳನ್ನು ಅವರಿಂದ ಕಲಿತೆ.

ಹೊಸ ಹುರುಪಿನಿಂದ ನನ್ನ ಕಥಾರಚನೆ ನಡೆದಿತ್ತು. ಎಷ್ಟೋ ಕಥೆಗಳ ಹಂದರವನ್ನು ಗುರುತು ಹಾಕಿಟ್ಟೆ. ಹಲವಾರು ಕಥೆಗಳನ್ನು ಬರೆದೆ. ನಾಲ್ಕಾರು ದೀಪಾವಳಿ ಸಂಚಿಕೆಗಳಲ್ಲಿ ಕಥೆಗಳು ಪ್ರಕಟವಾದವು. ಸಾಹಿತ್ಯ ವಲಯದಲ್ಲಿ ನನ್ನನ್ನು ಗುರುತಿಸಲಾರಂಭಿಸಿದರು.

ಬರೆಯುವುದನ್ನು ಬಹುತೇಕವಾಗಿ ಮನೆಯಲ್ಲೇ ಮಾಡುವುದು ಅನಿವಾರ್ಯವಿತ್ತು. ಸತತ ನಾಲ್ಕಾರು ಗಂಟೆ ಸಮಯ ನನಗೆ ಇನ್ನೆಲ್ಲಿ ದೊರಕಲು ಸಾಧ್ಯ? ರಾತ್ರಿ ಅಡುಗೆ ಕೆಲಸ ಬೇಗ ಮುಗಿಸಿ, ನೀವೇ ಬಡಿಸಿಕೊಂಡು ಊಟಮಾಡಿ ಎಂದು ಗಂಡ–ಮಕ್ಕಳಿಗೆ ಹೇಳಿ, ರೂಂ ಸೇರಿದ ಬಳಿಕ ಯಾವ ಅಡತಡೆಗಳು ಬಂದರೂ ಇಷ್ಟವಾಗುತ್ತಿರಲಿಲ್ಲ. ಹರಿಶ್ಚಂದ್ರ ಕೆಲವೊಮ್ಮೆ ಕಾಳಜಿಯಿಂದ 'ರಾತ್ರಿ ಎಷ್ಟಾಯಿತೂಂತ ಗೊತ್ತೇನೇ? ಮೂರಾಗ್ತಿದೆ. ಇನ್ನಾದರೂ ಮಲಗು' ಎಂದರೆ, ಇನ್ನೂ ಕೆಲವೊಮ್ಮೆ ಯಾವುದೋ ಹೊತ್ತಿನಲ್ಲಿ ಎದ್ದು 'ಏನೇ ಇಲ್ಲೇ ಮಲಗಿದ್ದೀಯಲ್ಲ? ಕಥೆ–ಗಿತೆ ಏನೂ ಬರೆಯೋದಿಲ್ವಾ?' ಎಂದು ರೇಗಿಸುತ್ತಿದ್ದ. ಹಲವಾರು ಬಾರಿ 'ನಿಂದು ಅತಿಯಾಯ್ತು. ತಲೆ ಕೆಟ್ಟಿದೆಯೇನೇ? ಲೇಖಕಿಯಾಗಿ ಕಿರೀಟ ಇಟ್ಕೋಬೇಕೂಂತಿದೀಯಾ? ಗಂಡ–ಮಕ್ಕಳು–ಮನೆಗಿಂತ ನಿನಗೆ ಕಥೆ ಬರೆಯುವುದೇ ಹೆಚ್ಚಾಯ್ತೇ?' ಎಂದು ಸಿಟ್ಟು ಮಾಡುತ್ತಿದ್ದುದು ಲೆಕ್ಕವಿಲ್ಲದಷ್ಟು ಬಾರಿ. ಇಂಥವೆಲ್ಲಾ ನೂರು–ನೂರು ಆದರೂ ನನ್ನ ಬರವಣಿಗೆಯನ್ನು ನಾನು ಬಿಡಲಿಲ್ಲ.

ಒಂದು ಭಾನುವಾರ ಕಥೆಗಾರ ಹೋವಾಳ್ ಮನೆ ಹುಡುಕುತ್ತಾ ಬಂದರು. ತಾವು ಏರ್ಪಡಿಸಲಿರುವ ಸಾಹಿತ್ಯ ಸಮಾವೇಶದಲ್ಲಿ ನನ್ನ ಕಥೆಯನ್ನು ವಾಚನ ಮಾಡಲು ಕೇಳಿದರು. ಮೊದಲು ಸಂಕೋಚದಿಂದ ನಿರಾಕರಿಸಿದೆನಾದರೂ, ಅವರ ನಿರಂತರ ಒತ್ತಾಯದಿಂದ ಒಪ್ಪಿದೆ. ಸಮಾವೇಶದಲ್ಲಿ ಇನ್ನೂ ಹಲವಾರು ಲೇಖಕರ ಪರಿಚಯವಾಯಿತು. ನನ್ನ ಕಥೆಗೆ ನಿರೀಕ್ಷೆ ಮೀರಿದ ಉತ್ತಮ ಸ್ಪಂದನ ಸಿಕ್ಕಿತು.

ಸುಪ್ರಸಿದ್ಧ ಸಾಹಿತ್ಯ/ಚಳವಳಿ/ಚಿಂತನೆಯ ಪತ್ರಿಕೆ 'ಅಸ್ಮಿತಾದರ್ಶ' ಏರ್ಪಡಿಸಿದ್ದ ಸಮಾವೇಶಕ್ಕೂ ನಾನು ಆಹ್ವಾನಿತಳಾದೆ. ಅಲ್ಲಿ ಸಮಾನ ಚಿಂತನೆಯ ಹಲವಾರು ಲೇಖಕರು ಯಶವಂತ್ ಖರಾತ್, ಭೀಮಸೇನ್ ದೇಠೆ ಪರಿಚಯವಾದರು. ನಂತರ ದಲಿತ ಸಾಹಿತ್ಯ ಸಮ್ಮೇಳನದಲ್ಲಿ ಪಾಲ್ಗೊಳ್ಳುವ ಅವಕಾಶ ದೊರಕಿತು. ಕೊಂಕಣ ಸಾಹಿತ್ಯ ಸಮ್ಮೇಳನದಲ್ಲಿ ಕಥೆ ಓದಿದೆ.

ಮಹತ್ವದ ಲೇಖಕ ಪದ್ಮಶ್ರೀ ಪುರಸ್ಕೃತ ದಯಾ ಪವಾರ್ ಬರೆದ 'ಬಲುತ' ಆತ್ಮ ಚರಿತ್ರೆ ಆಗ ಭಾರಿ ಪ್ರಸಿದ್ಧಿ ಗಳಿಸಿತ್ತು. ವಿವಾದವೂ ಉಂಟಾಗಿತ್ತು. ಸಾಹಿತ್ಯ ಸಮ್ಮೇಳನವೊಂದರಲ್ಲಿ ಅದುವರೆಗೆ ಬಂದ ದಲಿತ ಆತ್ಮಕಥೆಗಳನ್ನು ಕುರಿತ ಗೋಷ್ಠಿಯನ್ನು ಏರ್ಪಡಿಸಲಾಗಿತ್ತು. ಸಹಜವಾಗಿಯೇ 'ಬಲುತ' ಬಗ್ಗೆ ಪ್ರಸ್ತಾಪ ಬಂತು. ಆ ಗೋಷ್ಠಿಯಲ್ಲಿ ಕೃತಿ ಕರ್ತೃ ದಯಾ ಪವಾರ್ ಕೂಡ ಹಾಜರಿದ್ದರು. ಸಭಿಕರ ಕುತೂಹಲ ಅಪಾರವಾಗಿತ್ತು. ಅಪ್ಪಾ ರಣಪಿಸೆ, ಭಾವೂಸಾಹೇಬ್ ಅಡಸೂಳ್ ಮುಂತಾದವರು ವೇದಿಕೆಯ ಮೇಲಿದ್ದರು.

ಅದುವರೆಗಿನ ಎಲ್ಲಾ ದಲಿತ ಆತ್ಮಕತೆಗಳಲ್ಲಿ 'ಬಲುತ' ಶ್ರೇಷ್ಠ ಕೃತಿ ಎನಿಸಿತ್ತು. ಅದಕ್ಕೆ ಮುಕ್ತ ಪ್ರಶಂಸೆ ಸಿಕ್ಕಿತು. ಸಮ್ಮೇಳನದಲ್ಲೂ ಅದು ಪ್ರಚಂಡ ಮನ್ನಣೆಗೆ ಪಾತ್ರವಾಯಿತು.

ಈ ಸಂದರ್ಭದಲ್ಲಿ ತಮ್ಮ ಮಾತು ಪ್ರಾರಂಭಿಸಿದ ಇನ್ನೊಬ್ಬ ದಲಿತ ಲೇಖಕ ಅಡಸೂಳ್ 'ಬಲುತ'ವನ್ನು ಹಿಗ್ಗಾಮುಗ್ಗಾ ಚಚ್ಚಿದರು. ಲೇಖಕ ದಯಾ ಪವಾರ್‌ರ ಆತ್ಮ ಸಾಕ್ಷಿಯನ್ನು ಕೆದಕಿದರು. ಲೇಖಕರಾದವರು ಹೀಗೆ ಸಾರ್ವಜನಿಕವಾಗಿ, ಮುಖಕ್ಕೆ ಹೊಡೆದಂತೆ ಟೀಕೆಯನ್ನು ಎದುರಿಸಲೂ ಸಿದ್ಧರಿರಬೇಕಾಗುತ್ತದೆ ಎಂಬುದು ಆಗ ನನಗೆ ಅರಿವಾಯಿತು.

" 'ಬಲುತ'ದಲ್ಲಿ ಚಿತ್ರಿಸಲಾಗಿರುವ ದಲಿತ ಸಮುದಾಯದ ಅಮ್ಮ–ಅಕ್ಕಂದಿರ ಮರ್ಯಾದೆಯನ್ನು ವೇಶ್ಯಾ ಗೃಹದ ಜಗುಲಿಯಲ್ಲಿಟ್ಟಿದ್ದಾರೆ; ಬಾಬಾ ಸಾಹೇಬರೇನಾದರೂ ಇಂದು ಬದುಕಿದ್ದರೆ ಅವರು ಈ ಕೃತಿಯನ್ನು ತಮ್ಮ ಬೂಟುಕಾಲುಗಳಿಂದ ಒದ್ದು ಬಿಸಾಡುತ್ತಿದ್ದರು" ಎಂದು ತೀಕ್ಷ್ಣವಾಗಿ ಟೀಕಿಸಿದರು.

ಅಡಸೂಳ್‌ರ ಟೀಕೆ ಹರಿತವಾಗಿತ್ತು. ತೀಕ್ಷ್ಣತೆಯನ್ನು ಅನುಭವಿಸಿ ನಾನು ದಂಗು ಬಡಿದು ಕುಳಿತೆ. ಆಗ ನಾನು 'ಬಲುತ' ಓದಿರಲಿಲ್ಲ. ಆನಂತರ ಓದಿದೆ; ಆದರೆ ಅಡಸೂಳ್ ಅರ್ಥೈಸುವಿಕೆ ಸರಿಯಿರಲಿಲ್ಲ ಎನಿಸಿತು. ಅವರಿಗೆ ಅಂಬೇಡ್ಕರ್‌ರೂ ಸರಿಯಾಗಿ ಅರ್ಥವಾಗಿಲ್ಲ ಎನಿಸಿತು. 'ಬಲುತ'ದಲ್ಲಿ ಸಾಮಾಜಿಕ ವಾಸ್ತವ ಇರುವುದನ್ನು ಅಡಸೂಳ್‌ರಂಥ ಲೇಖಕರು ಏಕೆ ಕಾಣುವುದಿಲ್ಲ ಎಂದೆನಿಸಿತು.

* * *

ಮಧ್ಯಾಹ್ನದ ಸಮಯ. ಆಫೀಸಿನಲ್ಲಿದ್ದೆ. ನನ್ನನ್ನು ಕೇಳುತ್ತಾ ಯುವಕನೊಬ್ಬ ಒಳಬಂದ. ಸಹೋದ್ಯೋಗಿ ನನ್ನತ್ತ ಬೆರಳು

ತೋರಿಸಿದಾಗ ನನ್ನ ಟೇಬಲ್ ಬಳಿ ಬಂದು 'ನಮಸ್ಕಾರ' ಅಂದ. ನಾನು ಪ್ರತಿ ನಮಸ್ಕಾರ ಹೇಳುತ್ತಲೇ ನನ್ನ ಎದುರಿಗಿನ ಕುರ್ಚಿಯತ್ತ ಬೆರಳು ಮಾಡಿ 'ಇಲ್ಲಿ ಕುಳಿತುಕೊಳ್ಳಬಹುದೇ?' ಎಂದ. ಹೀಗೆ ಆ ಮುಂಚೆ ಯಾರೂ ಕೇಳಿರಲಿಲ್ಲ. ಯುವಕನ ಆತ್ಮವಿಶ್ವಾಸವನ್ನು ಮನಸ್ಸಿನಲ್ಲೇ ಮೆಚ್ಚಿಕೊಳ್ಳುತ್ತ 'ಏನು?' ಎಂದೆ.

ಯುವಕ ತನ್ನನ್ನು ಪರಿಚಯಿಸಿಕೊಂಡ. ಆತ ವಿಲಾಸ್ ಕೇಳಸ್ಕರ್. ನಮ್ಮ ಇಲಾಖೆಯ ನೌಕರ. 'ನೀವು ಕಥೆಗಾರ್ತಿ ಎಂದು ಮೊದಲು ತಿಳಿದಿರಲಿಲ್ಲ. ಈಚೆಗಷ್ಟೇ ಮಿತ್ರ ವಿಜಯ್ ಭಿಂಗಾರ್ಡೆ ತಿಳಿಸಿದಾಗ ಗೊತ್ತಾಗಿ ಬಹಳ ಸಂತೋಷವಾಯಿತು' ಎಂದ. ನಾನು ಕಿರುನಗೆಯಲ್ಲೇ ಥ್ಯಾಂಕ್ಸ್ ಭಾವವನ್ನು ತೋರ್ಪಡಿಸಿದೆ. ನನಗೆ ಆಗ ನೆನಪಾಯಿತು. ಈ ಯುವಕನನ್ನು ಒಂದೆರಡು ಸಲ ನೋಡಿದ್ದೆ. ನನಗಿಂತ ಕೆಳಗಿನ ಹುದ್ದೆಯಲ್ಲಿದ್ದ. ಹಾಗಾಗಿ ಏಕ ವಚನದಲ್ಲೇ ಮಾತು ಮುಂದುವರೆಸಿದೆ.

'ನಿಮ್ಮ ಕಥೆ ಎಲ್ಲೆಲ್ಲಿ ಪ್ರಕಟವಾಗಿವೆ?' ಎಂದು ವಿಚಾರಿಸಿದ. ನಾಲ್ಕಾರು ಪತ್ರಿಕೆ ಮತ್ತು ದೀಪಾವಳಿ ಸಂಚಿಕೆಗಳ ಹೆಸರುಗಳನ್ನು ಹೇಳಿದೆ. ಮತ್ತೊಮ್ಮೆ ಅಭಿನಂದನೆಗಳನ್ನು ತಿಳಿಸಿದ. ನಾನು ಉಪಚಾರಕ್ಕೆಂದು 'ನೀನೂ ಬರೀತೀಯಾ; ಕಥೆ ಬರೆದಿದ್ದರೆ ಹೇಳು; ಗೊತ್ತಿರುವ ಒಂದಿಬ್ಬರಿಗೆ ಹೇಳ್ತೇನೆ; ಪ್ರಕಟವಾಗಬಹುದು' ಎಂದೆ. ನನ್ನ ದನಿಯಲ್ಲಿ ದೊಡ್ಡಸ್ತಿಕೆ ತಂತಾನೆ ನುಸುಳಿ ಬಂದಂತಿತ್ತು. ವಿಲಾಸ್ ತುಸು ತಡೆದು,

'ನನ್ನದು ನಾಲ್ಕಾರು ಕಥೆಗಳು ಪ್ರಕಟವಾಗಿವೆ; ಇತ್ತೀಚಿನದಕ್ಕೆ ಒಳ್ಳೇ ಪ್ರತಿಕ್ರಿಯೆ ಬಂದಿದೆ' ಎಂದ.

ನನಗೆ ಆಶ್ಚರ್ಯವಾಯಿತು. ನನಗಿಂತ ಆರೆಂಟು ವರ್ಷ ಚಿಕ್ಕವ. ಆಗಲೇ ನಾಲ್ಕಾರು ಕಥೆ ಪ್ರಕಟವಾಗಿವೆ. ಇಂಥವನಿಗೆ ಉಪಕಾರ ಮಾಡುವ ಥರ ಕಥೆ ಪ್ರಕಟಣೆಗೆ ಶಿಫಾರಸ್ಸು ಮಾಡುವ ಮಾತಾಡಿದ್ದಕ್ಕಾಗಿ. ನಾಚಿಕೆಯೂ ಆಯಿತು.

"ಇತ್ತೀಚಿನದು ಯಾವ ಕಥೆ? ಎಲ್ಲಿ ಪ್ರಕಟವಾಗಿದೆ?" ನನ್ನ ಕುತೂಹಲ ಹೆಚ್ಚಿತ್ತು.

'ಸತ್ಯಕಥಾ'ದಲ್ಲಿ. ಕಥೆಯ ಹೆಸರು 'ಒಬ್ಬನಿದ್ದ' ಅಂತ ವಿಲಾಸನ ಉತ್ತರ. ನಾನು ನನಗೇ ಅರಿವಿಲ್ಲದಂತೆ 'ಆಂ' ಎಂದೆ. 'ಸತ್ಯಕಥಾ' ಎಷ್ಟೊಂದು ಮಹತ್ವದ ಪತ್ರಿಕೆ ಎಂಬುದನ್ನು ಬಾರಸ್ಕರ್ ಅವರು ತಿಳಿಸಿದ್ದರು. ನನ್ನ ಹುದ್ದೆಯ ಹಾಗೂ ನನ್ನ ಕಥೆಗಾರಿಕೆಯ ಗರ್ವಭಂಗವಾಗಿತ್ತು. ಆತನ ವಿನಯ ಗಮನಾರ್ಹವಿತ್ತು. ಆಗ ಹೊರಟು ನಿಂತ ಆತ, ಮತ್ತೆ ಮತ್ತೆ ಭೇಟಿಯಾಗುತ್ತಾ ಬಂದ. ಕಥೆಯ ಬಂಧದ ಬಗ್ಗೆ ಹಲವಾರು ವಿಷಯಗಳನ್ನು ಹಂಚಿಕೊಂಡೆವು. ನನ್ನ ಸೃಜನಶೀಲತೆ ಹೊಸ ಹೊಳಹು ಕಂಡಿತು.

* * *

ಮಕ್ಕಳು ದೊಡ್ಡವರಾಗಿ ತಮ್ಮ ಕೆಲಸ-ಕಾರ್ಯಗಳನ್ನು ತಾವೇ ಮಾಡಿಕೊಳ್ಳುತ್ತಿದ್ದರು. ಮನೆಗೆಲಸದಾಕೆ ಮನೆಗೆಲಸ ಮುಗಿಸುತ್ತಿದ್ದಳು. ನನ್ನ ಓದು, ಬರಹ, ಭಾಷಣ, ಸಮ್ಮೇಳನಗಳು ಸಾಗಿದ್ದವು. ಈ ಪ್ರಕ್ರಿಯೆಯಲ್ಲಿ ಹೆಚ್ಚು ಏಕಾಕಿತನ ಅನುಭವಿಸಿದ್ದು ಹರಿಶ್ಚಂದ್ರ. ಆಫೀಸ್ ಮುಗಿದ ಬಳಿಕ ನೇರವಾಗಿ ಮನೆಗೆ ಬರುವ ಪತ್ನಿ ಆತನಿಗೆ ಬೇಕಿತ್ತು. ಪತ್ನಿಯನ್ನು ಜನ ಕೊಂಡಾಡಿದರೆ ಅವನಿಗೆ ಅಸಮಾಧಾನವಾಗುತ್ತಿತ್ತು. ಇದರ ಮೂಲದಲ್ಲಿ ಅಸೂಯೆ ಇತ್ತೇನೊ. ಹೀಗಾಗಿ ಆತ ಕುಡಿತದ ಕಡೆ ಹೊರಳಿದ್ದನ್ನು ವಿಷಾದದಿಂದ ಗಮನಿಸಿದೆ.

ಕಥೆಗಾರ್ತಿಯಾಗಿ, ಭಾಷಣಕಾರಳಾಗಿ ಪ್ರಸಿದ್ಧಿ ದೊರಕಿತ್ತು. ಇದು ಆಫೀಸಿನಲ್ಲಿ ಹಲವರಿಗೆ ಸಂತೋಷ, ಹೆಮ್ಮೆಯ ವಿಷಯವಾಗಿತ್ತಾದರೂ ಕೆಲವರಿಗೆ ಹೊಟ್ಟೆ ಉರಿಯೂ ಇತ್ತು. ಕಡೆಗಣ್ಣಲ್ಲೇ ನೋಟ ಬೀರಿ ತಮ್ಮ ಅಸೂಯೆಯನ್ನು ವ್ಯಕ್ತಪಡಿಸುತ್ತಿದ್ದರು.

ಆಫೀಸಿನ ಅತ್ಯುನ್ನತ ಅಧಿಕಾರಿ ಎಸ್. ಆರ್. ತಾಂಬೆ ಮಾತ್ರ ನನ್ನ ಬಗ್ಗೆ ಅಭಿಮಾನ ಪಡುತ್ತಿದ್ದರು. ಒಮ್ಮೆ ಅವರ ಹೆಂಡತಿಯೇ 'ಲೇಖಕಿ ಉರ್ಮಿಳಾ ಪವಾರ್ ಯಾರು?' ಎಂದು ಹುಡುಕಿಕೊಂಡು ಬಂದು, ಚರ್ಚೆಗೆ ಕರೆದೊಯ್ದಿದ್ದರು. ನನ್ನ ಹೊಸ 'ಮಾರಿಷಸ್ ಪ್ರವಾಸ' ಕೃತಿಯ ಪ್ರತಿಯನ್ನು ಗೌರವದಿಂದ ನೀಡಿದಾಗ ತಾಂಬೆ ಅವರು ಸ್ವೀಕರಿಸಿ ಅಭಿಮಾನದ ಮಾತುಗಳನ್ನಾಡಿದರು.

ನನಗೆ ಪ್ರಮೋಷನ್ ಸಿಕ್ಕಾಗ, ನನ್ನ ಮೇಲೆ ಹೊಟ್ಟೆ ಕಿಚ್ಚು ಪಡುವವರ ಸಂಖ್ಯೆ ಹೆಚ್ಚಾಯಿತು. ಅವರಲ್ಲಿ ಕೆಲವರು 'ಈ ಹೆಂಗಸಿಗೆ ಸಿಗುತ್ತಿರುವ ಕೀರ್ತಿಗೆ ಜಾತಿಯೇ ಕಾರಣ' ಎಂದೂ ಪ್ರಚಾರ ಮಾಡಿದರು. ಪ್ರಮೋಷನ್‌ನಿಂದ ನನಗೆ ಆರ್ಥಿಕ ಅನುಕೂಲ ಅಷ್ಟೇನೂ ಇರಲಿಲ್ಲ. ಆದರೆ ಆಡಳಿತ ಯಂತ್ರದ ಏಣಿಯಲ್ಲಿ ಒಂದು ಮೆಟ್ಟಿಲು ಮೇಲೇರಿದ್ದೆ. ಅಧಿಕಾರದ ಹುದ್ದೆ ಸಿಕ್ಕಿತ್ತು.

1966ರಲ್ಲಿ ನಾನು ಕೆಲಸಕ್ಕೆ ಸೇರಿದೆ. ಆ ವರ್ಷಗಳಲ್ಲಿ ದಲಿತ ನೌಕರರ ಬಗ್ಗೆ ಅಸೂಯೆ ಪಡುವವರು ಬಹಳ ಜನ ಇರಲಿಲ್ಲ. ನಂತರದ ವರ್ಷಗಳಲ್ಲಿ ಮಾತ್ರ 'ಸರ್ಕಾರದ ಮುದ್ದು ಕೂಸುಗಳು', 'ಸರ್ಕಾರಿ ಬ್ರಾಹ್ಮಣರು', 'ಸೊಕ್ಕಿದವರು', 'ಪ್ರತಿಭಾಹೀನರು' ಮುಂತಾದ ವಿಶೇಷಣಗಳು ಕೇಳಿ ಬಂದವು. ನಾನು ಮಹಾರಾಷ್ಟ್ರ ರಾಜ್ಯ ಸಚಿವಾಲಯದಲ್ಲಿ ಸೆಕ್ಷನ್ ಆಫೀಸರ್ ಆಗಿ ಪ್ರಮೋಷನ್ ಪಡೆದದ್ದು ಈ ಕಾಲದಲ್ಲಿ; ಅಂದರೆ ನನ್ನ ಬಗ್ಗೆಯೂ – ಈ ವಿಶೇಷಣಗಳನ್ನು ಆಡಲಾಯಿತು.

ಹೊಸ ಹುದ್ದೆಯ ಕರ್ತವ್ಯಭಾರ ವಹಿಸಿಕೊಂಡ ಬಳಿಕ ನಾನು ಹೆಚ್ಚೇನೂ ಬದಲಾಗಲಿಲ್ಲ. ಇತರ ಜಾತಿಯವರಿಗೆ ಪ್ರಮೋಷನ್ ಬಂದರೆ, ಅವರಿಗೆ ಸನ್ಮಾನ ಕಾರ್ಯಕ್ರಮಗಳು ನಡೆಯುತ್ತವೆ; ಇತರ ಜಾತಿಯ ಮಹಿಳೆಯರೂ ಪ್ರಮೋಷನ್ ಪಡೆದು ಸನ್ಮಾನ ಮಾಡಿಸಿಕೊಂಡದ್ದನ್ನು ನಾನು ಕಂಡಿದ್ದೆ, ದಲಿತ ಜಾತಿಯ ಪುರುಷರೂ ಪ್ರಮೋಷನ್ ಗಳಿಸಿ ಸನ್ಮಾನ ಮಾಡಿಸಿಕೊಂಡಿದ್ದು ಬಹುತೇಕವಾಗಿ SC/ST ನೌಕರರಿಂದ ಉಂಟು. ನಾನು ದಲಿತ ಮಹಿಳೆ. ಯಾರು ತಾನೇ ನನಗೆ ಸನ್ಮಾನ ಮಾಡಿಯಾರು? ನನಗೆ ದೊರೆತ ಪ್ರಮೋಷನ್‌ನಿಂದ ಇತರರಿಗಿರಲಿ, ನನ್ನ ದಲಿತ ಜಾತಿಯ ಪುರುಷ ನೌಕರರಿಗಾದರೂ ಸಂತೋಷವಾಗಿತ್ತೇ? ಖಾತ್ರಿಯಿಲ್ಲ.

ದಲಿತ ಮಹಿಳೆಯರ ಬಗ್ಗೆ ದಲಿತ ಚಳವಳಿ ಮುಖಂಡರೂ ಕೂಡ ತಾತ್ಸಾರದಿಂದ ಇರುವುದು ನನಗೆ ಕಂಡಿತ್ತು. ಆದರೆ ನಾನು ಆ ಬಗ್ಗೆ ಹೆಚ್ಚು ಮಾತಾಡಿರಲಿಲ್ಲ. ದಲಿತ ಸಾಹಿತ್ಯ ಅಥವಾ ಚಳವಳಿಗೆ ಸಂಬಂಧಿಸಿದ ಕಾರ್ಯಕ್ರಮಗಳಿಗೆ ಆಹ್ವಾನಿತಳಾಗಿ ಹೋದಾಗಲೂ ಎರಡನೇ ದರ್ಜೆಯ ಸ್ಥಾನಮಾನ ನೀಡಿದಾಗ ನೋವಾಗಿದ್ದುಂಟು. ಇವರು ತಮ್ಮ 'ಸ್ವಾಭಿಮಾನಿ' ಚಳವಳಿಯಲ್ಲಿ ಮಹಿಳೆಯರ ಸ್ವಾಭಿಮಾನವನ್ನು ಹೊಸಕಿ ಹಾಕುವುದೇಕೆ? ಇದು ಇವರಿಗೆ ತಿಳಿಯುವುದಿಲ್ಲವೆ? ಅಥವಾ ಇವರೂ ಹುಕುಂಶಾಹಿಗಳಾಗಲು ಬಯಸಿದ್ದಾರೆಯೆ? ಎಂಬ ಪ್ರಶ್ನೆಗಳು ತಲೆ ಎತ್ತಿದವು. ಹಾಜರಾದ ಹತ್ತಾರು ಕಾರ್ಯಕ್ರಮಗಳಲ್ಲಿ ಈ ಪ್ರಶ್ನೆಗಳನ್ನು ಎತ್ತಿದೆ. 'ಫುಲೆ-ಅಂಬೇಡ್ಕರ್ ವಿಚಾರ ಧಾರೆಯಿಂದ ನೀವು ಕಲಿತಿದ್ದು ಇದೇ ಏನು?' ಎಂದೂ ತೀಕ್ಷ್ಣವಾಗಿ ಪ್ರಶ್ನಿಸಿದೆ.

* * *

ಮನೆಯ ಪರಿಸ್ಥಿತಿ ಬಿಗಡಾಯಿಸುತ್ತಾ ಸಾಗಿತ್ತು. ಹರಿಶ್ಚಂದ್ರನನ್ನು ಡಿಗ್ರಿ ಮಾಡಲು ಪುಸಲಾಯಿಸಿದೆ. ಆತನ ಮಿತ್ರರನೇಕರು ಎಸ್. ಆರ್. ಜಾಧವ್, ಹಿಂದಳೇಕರ್, ರಮಾಕಾಂತ್ ಯಾದವ್ ಮುಂತಾದವರು ಸಿದ್ಧಾರ್ಥ ಕಾಲೇಜಿನಲ್ಲಿ ಮುಂಜಾನೆ ತರಗತಿಗೆ ಹಾಜರಾಗಿ ನಂತರ

ಆಫೀಸಿಗೆ ಹೋಗುತ್ತಿದ್ದರು. ಇದನ್ನು ಉದಾಹರಣೆ ಕೊಟ್ಟೆ. ಪ್ರಯೋಜನ ವಾಗಲಿಲ್ಲ.

ಹರಿಶ್ಚಂದ್ರ ಒಳ್ಳೇ ಕ್ರೀಡಾಪಟುವಾಗಿದ್ದ. ಎಷ್ಟೋ ಬಹುಮಾನಗಳನ್ನು ಗೆದ್ದಿದ್ದ. ರಾಜಕಾರಣದಲ್ಲೂ ಅಭಿರುಚಿ ಇತ್ತು; ಹೊಸ ಪುಸ್ತಕಗಳನ್ನು ಓದುತ್ತಿದ್ದ. ಪೋಸ್ಟಲ್ ನೌಕರರ ಸಂಘದ ನಾಯಕನಾಗಿದ್ದ; ಒಳ್ಳೇ ಭಾಷಣಕಾರ ಎಂದೂ ಖ್ಯಾತಿ ಗಳಿಸಿದ್ದ. ಎಂಥವರೊಂದಿಗೂ ಆತ್ಮೀಯತೆಯಿಂದ ಬೆರೆಯುತ್ತಿದ್ದ. ಸರಳ ಜೀವಿ. ಒಂದು ಒಳ್ಳೇ ಚಹಾಕ್ಕೆ ಮನಸೋತು ಬಿಡುತ್ತಿದ್ದ. ಹೈಸ್ಕೂಲ್ ಓದಿದ್ದು ಸಾನೆ ಗುರೂಜಿ ಹಾಸ್ಟೆಲ್‌ನಲ್ಲಿ. ಉತ್ತಮ ಸಂಸ್ಕಾರ ಸಿಕ್ಕಿತ್ತು. ಹೀಗಾಗಿ ಎಲ್ಲರಿಂದ ಶಹಭಾಷ್ ಗಳಿಸುತ್ತಿದ್ದ. ಆದರೆ ಹೆಂಡತಿಯ ವಿಚಾರದಲ್ಲಿ ಮಾತ್ರ ಆತ ಸನಾತನವಾದಿಯಾಗಿದ್ದ; ಎಲ್ಲಾ ಹುದ್ದೆಗಳಲ್ಲೂ ಮುಕ್ತತೆಯನ್ನು ಒದಗಿಸುತ್ತಿದ್ದ ಆತ, 'ಗಂಡ'ನ ಪಾತ್ರದಲ್ಲಿ ಮಾತ್ರ ಪ್ರತಿಷ್ಠೆಯನ್ನು ಮೆರೆಯುತ್ತಿದ್ದ.

ಡಿಗ್ರಿ ಮುಗಿಸಲು ಎಷ್ಟು ಹೇಳಿದರೂ ಹರಿಶ್ಚಂದ್ರ ಕೇಳಲಿಲ್ಲ. ಮತ್ತೆ ಮತ್ತೆ ಹೇಳಿ ನಾನೂ ಸುಸ್ತಾದೆ. ಕಡೆಗೆ 'ನಾನೇ ಯಾಕೆ ಮಾಡಬಾರದು?' ಎಂಬ ಯೋಚನೆ ಬಂತು. ನನ್ನ ಆಫೀಸಿನ ದಾರಿಯಲ್ಲೇ ಕಾಲೇಜಿತ್ತು. ಸೇರಿದರೆ ಹೆಚ್ಚು ಕಷ್ಟವೇನೂ ಆಗುತ್ತಿರಲಿಲ್ಲ. ಆ ದಿನ ಸಂಜೆ ಗಂಡನನ್ನು ಕೇಳಿದೆ. ಆತ ತಟ್ಟನೆ 'ಮನೆ ಕೆಲಸ, ಆಫೀಸಿನ ಡ್ಯೂಟಿ, ಕಥೆ–ಕಾದಂಬರಿ, ಭಾಷಣ ಇಷ್ಟರ ಮೇಲೆ ಈಗ ಡಿಗ್ರಿ ವಿಷಯಾನಾ? ಅದೇಕೆ ಬೇಕು ನಿನಗೆ? ಪ್ರಮೋಷನ್ ಕೂಡ ಬಂದಾಯ್ತಲ್ಲ?' ಎಂದು ಬಿಟ್ಟ. ಮಾತು ಮುಂದುವರೆಸೋಣ ಎಂದರೆ, ಮುಖ ತಿರುಗಿಸಿಕೊಂಡು ಹೋಗೇ ಬಿಟ್ಟ.

ಎರಡು ದಿನ ಬಿಟ್ಟು ಮತ್ತೆ ವಿಷಯ ಪ್ರಸ್ತಾಪಿಸಿದೆ. 'ಯಾವ ವಿಷಯ?' ಅಂದ. ಬಿಡಿಸಿ ಹೇಳಿದೆ. 'ಓಹ್ ಅದಾ? ಆಗಲೇ ಹೇಳಿದೆನಲ್ಲ? ಅದರ ಅವಶ್ಯಕತೆ ಏನಿಲ್ಲ; ಇಷ್ಟರ ಮೇಲೆ ನಿನ್ನಿಷ್ಟ' ಎಂದು ಮಾತು ಕಟ್ ಮಾಡಿದ.

ವಾರ, ಎರಡು ವಾರ ನಾನು ಈ ವಿಷಯ ಮರೆಯಲು ಪ್ರಯತ್ನಿಸಿದೆ. ತಾನು ಡಿಗ್ರಿ ಮಾಡಲ್ಲ; ಹೆಂಡತಿ ಮಾಡಿದರೆ ತನ್ನ ಪ್ರತಿಷ್ಠೆಗೆ ಕುಂದು ಎಂದು ತಿಳಿದಿರಬಹುದು; ಸ್ವಲ್ಪ ದಿನ ಕಳೆದು ಮತ್ತೆ ಈ ವಿಷಯ ಮಾತಾಡೋಣ ಎಂದುಕೊಂಡೆ. ನನಗೆ ಓದುವ, ಬರೆಯುವ, ಜನರೊಡನೆ ಬೆರೆಯುವ, ನನ್ನ ಪ್ರತಿಭೆ ತೋರುವ, ಹಾಗೂ ಜನರಿಗೆ ಏನಾದರೊಂದು ರೀತಿಯಲ್ಲಿ ನೆರವಾಗುವ ಆಸಕ್ತಿ ಗಾಢವಾಗುತ್ತಿತ್ತು. ಇದು ನನಗೆ ತಿಳಿಯುತ್ತಿತ್ತು. ಇದೇ ಕಾಲದಲ್ಲಿ ನನ್ನ ಸಂಸಾರದಲ್ಲಿ, ವಿಶೇಷವಾಗಿ ನಾವು ಗಂಡ–ಹೆಂಡತಿ ನಡುವೆ, ಅಂತರ ನಿರ್ಮಾಣವಾಗುತ್ತಿತ್ತು. ಇದೂ ನನಗೆ ಚೆನ್ನಾಗಿ ತಿಳಿಯುತ್ತಿತ್ತು.

ಗಂಡ ನನ್ನ ವಿಚಾರದಲ್ಲೂ ಉದಾರವಾಗಿ ವರ್ತಿಸಲಿ ಎಂದು ಆಶಿಸುವುದು ತಪ್ಪೇ? ನನ್ನ ಪ್ರತಿಭೆಗೆ ವೇದಿಕೆ ಹುಡುಕುವುದು ಸಂಸಾರ ಮುರಿಯುವ ಲಕ್ಷಣವೇ? ಗಂಡ–ಮಕ್ಕಳನ್ನು ತಾನೇನೂ ನಿರ್ಲಕ್ಷಿಸುತ್ತಿಲ್ಲವಲ್ಲ? ಗಂಡನಿಗಿಂತ ನಾಲ್ಕು ತಾಸು ಹೆಚ್ಚೇ ಕೆಲಸ ಮಾಡುತ್ತಿಲ್ಲವೇ? ಮೆಚ್ಚಿ ಮದುವೆಯಾದ ಗಂಡನೇ ಹೀಗಾದರೆ, ನನ್ನಿಬ್ಬರು ಹೆಣ್ಣು ಮಕ್ಕಳಿಗೆ ಸಿಕ್ಕುವ ಗಂಡಂದಿರು ಇನ್ನು ಹೇಗಿರುತ್ತಾರೋ? ಸಂಸಾರ ಬಿಟ್ಟು ಹೆಂಗಸಿಗೆ ಬೇರಾವ ಕ್ಷೇತ್ರವೂ ಬೇಡವೇ? ... ... ಮುಂತಾಗಿ ಪ್ರಶ್ನೆಗಳು ಕಾಡುತ್ತಿದ್ದವು.

ಮೂರ್‍ನಾಲ್ಕು ತಿಂಗಳ ಬಳಿಕ ಒಂದು ಮುಂಜಾನೆ ವಿಷಯವನ್ನು ಮತ್ತೆ ಪ್ರಸ್ತಾಪಿಸಿದೆ. ಅದೇ ಪ್ರತಿಕ್ರಿಯೆ ಬಂದಾಗ ನಾನೇ ಧೈರ್ಯ ಮಾಡಿ 'ಮನೆಗೆ ಏನೂ ಅಡೆ ತಡೆ ಆಗೊಲ್ಲ. ನಾನು ಬಿ.ಎ.ಗೆ ಸೇರ್ತೀನಿ' ಎಂದೆ. ಒಂದುಬಾರಿ ತಲೆಎತ್ತಿ ನೋಡಿದ ಹರಿಶ್ಚಂದ್ರ, ಸ್ನಾನ ಮಾಡಲು ಎದ್ದುಹೋದ.

ನನ್ನ ದಿನಚರಿ ಇನ್ನೂ ಟೈಟ್ ಆಯಿತು. ಎಂದಿನ ಕೆಲಸಗಳ ಜೊತೆಗೆ ಕ್ಲಾಸ್‌ಗೆ ಹಾಜರಾಗಬೇಕಾಯ್ತು; ಲೈಬ್ರರಿಯಿಂದ ಪುಸ್ತಕ ಪಡೆದು ಓದಲಾರಂಭಿಸಿದೆ. ಆ ವರ್ಷದಲ್ಲಿ ನನಗೆ ಅಪಘಾತವಾಗಿ ಕಾಲಿಗೆ ಬ್ಯಾಂಡೇಜ್ ಬೇರೆ ಬಂತು. ಹಾಗಾಗಿ ಗಂಡನಿಗೆ ಇನ್ನೂ ಭಾರವಾದೆ.

ಕಾಲು ಸರಿ ಹೋಗಲು ಮೂರು ತಿಂಗಳು ಬೇಕಾಯಿತು. ನಂತರ ನಾನು ನನ್ನ ಕಾರ್ಯಕ್ರಮಗಳನ್ನು ಸೀಮಿತಗೊಳಿಸಿಕೊಂಡೆ. ಡಿಗ್ರಿ ಒಂದರ ಕಡೆಗೇ ಗಮನ ಹರಿಸಿದೆ. ಪ್ರತಿ ವರ್ಷ ಚೆನ್ನಾಗಿ ಓದಿ ಉತ್ತಮ ಅಂಕ ಗಳಿಸಿ ಬಿ.ಎ. ಮುಗಿಸಿದೆ. ಪ್ರಮಾಣ ಪತ್ರ ದೊರೆತಾಗ, ಮೊದಲು ಹರಿಶ್ಚಂದ್ರನ ಮುಂದಿಟ್ಟೆ. ಅಭಿಮಾನ, ಪ್ರೀತಿಗಳಿಂದ ಬಿಗಿದಪ್ಪಿದ. ಆತನಿಗೂ ಹೆಮ್ಮೆ ಮೂಡಿತ್ತು. ಮಕ್ಕಳ ಜೊತೆ ಹೋಗಿ ಸಿಹಿ ತಂದ. ಪರಿಚಿತರೆಲ್ಲರಿಗೂ ಹಂಚಿದ; ಪತ್ನಿ ಡಿಗ್ರಿ ಪಡೆದದ್ದಕ್ಕೆ ಹಿಗ್ಗಿದ. ಪ್ರಮಾಣ ಪತ್ರಕ್ಕೆ ಫ್ರೇಂ ಹಾಕಿಸಿ ತಂದು, ಹಾಲ್‌ನಲ್ಲಿ ತೂಗು ಹಾಕಿದ.

ತಿಂಗಳು ಕಾಲ ಡಿಗ್ರಿಯ ಮತ್ತು ನನ್ನನ್ನು ಆವರಿಸಿತ್ತು. ಆಫೀಸಿನವರು, ಹೊರಗಿನವರು ಅಭಿನಂದಿಸಿದಾಗ ಮನಸ್ಸು ಉಬ್ಬುತ್ತಿತ್ತು. ನನ್ನ ಆತ್ಮವಿಶ್ವಾಸ ಗಾಢವಾಗಿತ್ತು. ಈ ವಯಸ್ಸಿನಲ್ಲೂ ನಾನು ಕಲಿಯಬಹುದು ಎಂಬ ಭರವಸೆ ಮೂಡಿತ್ತು.

ಈ ಉತ್ಸಾಹದ ಹಿಂದೆಯೇ ಸಂಕಟದ ಗಳಿಗೆಯೂ ಬಂತು. ಸಹೋದ್ಯೋಗಿಯೊಬ್ಬರು 'ಹೇಗೂ ಬಿ.ಎ. ಆಯಿತು; ಸಾಹಿತ್ಯದಲ್ಲಿ ನಿಮಗೆ ಆಸಕ್ತಿಯಿದೆ; ಎಂ.ಎ ಒಂದು ಮಾಡಿಬಿಡ್ರಿ; ನಂತರ ಪಿಹೆಚ್.ಡಿ ಮಾಡಿ ಡಾಕ್ಟರ್ ಅನಿಸಿಕೊಳ್ಳಬಹುದು.....' ಎಂಬ ಸಲಹೆಯನ್ನು ನೀಡಿದರು. ನನಗೆ ಇದು ಹೊಳೆದಿರಲಿಲ್ಲ. ಆದರೆ, ಈ ಸಲಹೆಗೆ ಆ ಕ್ಷಣವೇ ನಾನು ಮಾರುಹೋದೆ. ಈ ವಿಚಾರ ಮುಂದಿಟ್ಟರೆ ಗಂಡನಿಂದ ಏನು ಉತ್ತರ ಬಂದೀತೆಂದು ವಿಚಾರ ಮಾಡದೇ, ಆ ರಾತ್ರಿ ಈ ವಿಚಾರ ಹೇಳಿಬಿಟ್ಟೆ. ಭಾರೀ ಭೂಕಂಪವೇ ಆಗಿ ಹೋಯಿತು.

ಹರಿಶ್ಚಂದ್ರ ಪೂರ್ತಿ ವಿರೋಧಿಸಿದ. ಎಂ.ಎ. ಅವಶ್ಯಕತೆ ನಿನಗೇನಿದೆ? ನೀನು ನೌಕರಿ ಬದಲಿಸ್ತೀಯಾ? ಮನೆ–ಗಂಡ–ಮಕ್ಕಳು ನಿನಗೆ ಬೇಡವೇ? ಮಕ್ಕಳು ದೊಡ್ಡವರಾಗ್ತಿದಾರೆ. ಅವರಿಗೆ ಪಾಠ ಹೇಳಿಕೊಡು; ...ಇತ್ಯಾದಿ ಉಪದೇಶ ಬಂತು.

'ನಾನು ಮನೆ ವಿಚಾರದಲ್ಲಿ ಯಾವುದಕ್ಕೂ ಕಡಿಮೆ ಮಾಡಿಲ್ಲ. ಎಲ್ಲಾ ಜವಾಬ್ದಾರಿ ಸರಿಯಾಗಿ ನಿರ್ವಹಿಸ್ತಾ ಇದೀನಿ; ನಾನು ಎಂ.ಎ.ಗೆ ಸೇರಿಕೊಂಡ್ರೆ ನಿಮ್ಗೆ, ಮಕ್ಕಳಿಗೆ ಏನ್ ತೊಂದ್ರೆಯಾಗುತ್ತೆ ಅದನ್ನ ಹೇಳ್ರಿ' ಎಂದು ವಾದಿಸಿದೆ.

'ಏನ್ ತೊಂದ್ರೆ ಅಂತ ಕೇಳ್ತೀಯಾ? ಓದಿದ್ರೆ ಏನ್ ಬರುತ್ತೆ? ಅದನ್ನು ಹೇಳು' ಹರಿಶ್ಚಂದ್ರನ ದನಿ ಏರಿತ್ತು; ಆವೇಶ ತುಂಬಿತ್ತು.

'ಪ್ರತಿ ದಿನ ಬಾರ್‌ಗೆ ಹೋಗಿ ಕುಡ್ದು ಬರ್ತೀರಲ್ಲ; ಅದ್ರಿಂದ ಏನು ಬರುತ್ತೆ? ನೀವು ಹೇಳ್ರಿ' ನನ್ನ ಮಾತು ನಾಲಿಗೆ ದಾಟಿ ಬಂದು ಬಿಟ್ಟಿತು.

ಹರಿಶ್ಚಂದ್ರ ಷಾಕ್ ಹೊಡೆದಂತೆ ತಣ್ಣಗಾಗಿ ಬಿಟ್ಟ. ಆ ಮಾತು ಆಡಬಾರದಿತ್ತೆಂದು ನನಗೂ ಅನಿಸಿತು. ತಗ್ಗಿದ ದನಿಯಲ್ಲಿ 'ಕ್ಷಮಿಸಿ; ನಾನು ಹಾಗೆ ಎದುರು ವಾದಿಸಬಾರದಿತ್ತು' ಎಂದೆ. ಈ ಮಾತನ್ನು ಕೇಳಿಸಿಕೊಳ್ಳದಂತೆ ಆತ ಅಲ್ಲಿಂದ ಎದ್ದು ಹೋದ.

'ಮನೆ ಜವಾಬ್ದಾರಿ ಹೆಂಗಸಿನದು' ಎಂಬುದು ಹರಿಶ್ಚಂದ್ರನ ತಿಳಿವಳಿಕೆ ಯಾಗಿತ್ತು. ಇದನ್ನು ಬದಲಾಯಿಸಿಕೊಳ್ಳಲು ಆತ ತಯಾರಿರಲಿಲ್ಲ.

ಮೂರೂ ಮಕ್ಕಳನ್ನು ಭಾಷಾ ಪ್ರೇಮದಿಂದಾಗಿ ಮರಾಠಿ ಮಾಧ್ಯಮದ ಶಾಲೆಗೆ ಸೇರಿಸಿದ್ದೆವು. ಭವಿಷ್ಯದ ಬಗ್ಗೆ ಸರಿಯಾಗಿ ಯೋಚಿಸುವಲ್ಲಿ ಆಗ ಫೇಲಾದೆವೆಂದು ಈಗ ಅನಿಸುತ್ತಿದೆ. ಭಾಷೆಯ ಮೇಲೆ ಪ್ರೇಮ ಇರುವುದನ್ನು ಸಾಬೀತುಪಡಿಸಲು ಮಕ್ಕಳ ಹಿತ ಬಲಿ

ಕೊಡಬೇಕೆಂದೇನಿಲ್ಲ. ಮಕ್ಕಳು ಚೆನ್ನಾಗಿ ಓದುತ್ತಿದ್ದರು. ಬಡತನದ ಬೇಗೆಯಿಂದ ಮುಕ್ತರಾಗಿದ್ದರು; ಆದರೆ ಜಾತಿಯ ಅವಹೇಳನದ ಅನುಭವ ನಿಂತಿರಲಿಲ್ಲ.

* * *

ಎಂ.ಎ.ಗೆ ಪ್ರವೇಶ ಪಡೆದೆ. ಮತ್ತೆ ಅಭ್ಯಾಸ ಶುರುವಾಯಿತು. ಬಿ.ಎ.ನಲ್ಲಿದ್ದಾಗ ಪರಿಚಯವಾಗಿದ್ದ ಹೀರಾ ಬನಸೊಡೆ ಆಪ್ತ ಸ್ನೇಹಿತೆಯಾಗಿದ್ದಳು. ನಮ್ಮದು ಬಹುತೇಕ ಸಮಾನ ಆಸಕ್ತಿಯಾಗಿತ್ತು. ಸಾಹಿತ್ಯ, ಬಾಬಾಸಾಹೇಬ್, ಚಳವಳಿ, ದಲಿತ ಸಂಘಟನೆ ಇತ್ಯಾದಿ.

ಇದು 1980ರ ಕಾಲ. ಮರಾಠವಾಡಾ ವಿಶ್ವವಿದ್ಯಾಲಯಕ್ಕೆ ಅಂಬೇಡ್ಕರ್ ಹೆಸರಿಡಲು ವಿಧಾನ ಸಭೆ ಕೈಗೊಂಡ ನಿರ್ಣಯವನ್ನು ಜಾರಿಗೊಳಿಸಲು ಹಿಂದೂ ಸವರ್ಣೀಯರು ಅಡ್ಡಿಯಾಗಿದ್ದರು. ಮಹಾರಾಷ್ಟ್ರದ ಹಲವು ಭಾಗಗಳಲ್ಲಿ ದಲಿತರ ಮೇಲೆ ಹಲ್ಲೆ, ದೌರ್ಜನ್ಯ, ಕೊಲೆಗಳು ನಡೆದಿದ್ದವು. ರಾಜ್ಯಾದ್ಯಂತ ದಲಿತರು ಪ್ರತಿಭಟನೆಗೆ ಮುಂದಾಗಿದ್ದರು. ವಿವಿಧ ದಲಿತ ಸಂಘಟನೆಗಳು ಸಮನ್ವಯ ಸಮಿತಿಯನ್ನು ರಚಿಸಿಕೊಂಡಿದ್ದವು. ಮುಂಬಯಿಯಲ್ಲೂ ಸಭೆ, ಪ್ರತಿಭಟನೆ, ಮೆರವಣಿಗೆಗಳು ನಡೆದಿದ್ದವು. ಆಜಾದ್ ಮೈದಾನದಲ್ಲಿ ದಿನನಿತ್ಯ ಪ್ರದರ್ಶನಗಳು ಏರ್ಪಾಟಾಗುತ್ತಿದ್ದವು. ಈ ಕಾರ್ಯಕ್ರಮಗಳಲ್ಲಿ ಕೊಳೆಗೇರಿಗಳ/ಹಳ್ಳಿಗಾಡಿನ ಸಹಸ್ರಾರು ದಲಿತರು ಪಾಲ್ಗೊಳ್ಳುತ್ತಿದ್ದರು. ಇವರ ಕಾಲಲ್ಲಿ ಚಪ್ಪಲಿ ಇರುತ್ತಿರಲಿಲ್ಲ; ಸೊಂಟದಲ್ಲಿ ಕೂಸುಗಳನ್ನು, ತಲೆ ಮೇಲೆ ಬುತ್ತಿ ಹೊತ್ತು ಇವರು 'ನಾಮಾಂತರ್ ಝಾಲಾಚ ಪಾಹಿಜೆ' (ಹೆಸರು ಬದಲಾಗಲೇಬೇಕು) ಎಂದು ಕೂಗುತ್ತಾ ಮೆರವಣಿಗೆಯಲ್ಲಿ ಸಾಗುತ್ತಿದ್ದರು. ಆದರೆ ಈ ಯಾವ ಪ್ರತಿಭಟನೆಯಲ್ಲೂ ನನ್ನಂಥ ವಿದ್ಯಾವಂತ ದಲಿತ ಮಹಿಳೆಯರು ಕಾಣಲಿಲ್ಲ. ಈ ಸತ್ಯ ನನ್ನನ್ನು ಅಣಕಿಸಿತು. ಬಿ.ಎ., ಎಂ.ಎ. ಓದುವುದಕ್ಕೇ ಅಡ್ಡಿಪಡಿಸುವ ದಲಿತ ಗಂಡಸರು ಇರುವಾಗ, ನಾವು ಹೇಗೆ ತಾನೇ ಇಂಥ ಮೆರವಣಿಗೆಗಳಲ್ಲಿ ಭಾಗವಹಿಸಿಯೇವು ಎಂದೂ ಅನಿಸಿತು.

ಈ ತುಯ್ದಾಟ ನನ್ನಲ್ಲಿ ಬಹುಕಾಲ ಇತ್ತು. ನ್ಯಾಯ-ಸಮಾನತೆಗಾಗಿನ ಹೋರಾಟದಲ್ಲಿ ದಲಿತ ಪುರುಷರಿಗೆ ಸಮವಾಗಿ ದಲಿತ ಮಹಿಳೆಯರು ಭಾಗಿಯಾಗಬಾರದೇಕೆ ಎಂದು ನಾನು ಈ ಎಂಟು ವರ್ಷಗಳಲ್ಲಿ ಹತ್ತೆಂಟು ಸಭೆ, ಕಾರ್ಯಕ್ರಮ, ವಿಚಾರ ಸಂಕಿರಣಗಳಲ್ಲಿ ಮಾತಾಡಿದೆ. ಎಷ್ಟು ಪ್ರಯೋಜನವಾಯಿತೊ!

1988ರಲ್ಲಿ ಮುಂಬೈನಲ್ಲಿ ಬಾಬಾಸಾಹೇಬರ 'Riddles in Hinduism' ಕೃತಿ ನಿಷೇಧಿಸಲು ಶಿವಸೇನೆ ಒತ್ತಾಯಿಸಿದಾಗ, ಇದರ ವಿರುದ್ಧ ನಡೆದ ದಲಿತ ಚಳವಳಿಯಲ್ಲಿ ನಾನು ಸಕ್ರಿಯವಾಗಿ ಭಾಗವಹಿಸಿದೆ. ದಲಿತ ಪುರುಷರ ಅಡಿಯಾಳಾಗಿರಲು ತಯಾರಿಲ್ಲ ಎಂಬುದನ್ನೂ ಈ ಮೂಲಕ ನಾನಂತೂ ಸಾಬೀತು ಪಡಿಸಿದೆ.

ಹೀರಾ ಬನಸೋಡೆ ಒಂದು ದಿನ 'ದಾದರ್'ನಲ್ಲಿ ಕೆಲವರು 'ಮೈತ್ರಿಣ' (ಗೆಳತಿಯರು) ಎಂಬ ಮಹಿಳಾ ಸಂಘಟನೆ ರಚಿಸಿಕೊಂಡಿದ್ದಾರೆ. ನಾನು ಅಲ್ಲಿಗೆ ಆಗಾಗ ಹೋಗುತ್ತಿರುತ್ತೇನೆ, ನೀನೂ ಬರ್ತೀಯಾ?' ಎಂದಳು. ಒಪ್ಪಿದೆ.

ಆ ದಿನ ಶನಿವಾರ. ಸಂಜೆ ಆಫೀಸಿನಿಂದ ಬೇಗ ಹೊರಟು ನಾವಿಬ್ಬರೂ ದಾದರ್ ತಲುಪಿದೆವು. ಹೀರಾ ಮೊದಲೇ ಹೇಳಿದ್ದಳೆಂದು ಕಾಣುತ್ತದೆ; ಅಲ್ಲಿ ಆಕೆಯ ಗಂಡ ಬನಸೋಡೆ ಕಾಯುತ್ತಿದ್ದರು. ನನ್ನನ್ನು ಪರಿಚಯಿಸಿದ ಬಳಿಕ ಬನಸೋಡೆ 'ನಾನೂ ಬರ್ತಿದೀನಿ. ಬನ್ನಿ ಹೋಗೋಣ' ಎಂದು ನಮ್ಮನ್ನು ಕರೆದೊಯ್ದರು.

ಅದೊಂದು ಬಾಲಕಿಯರ ಶಾಲೆ. ಅಲ್ಲಿನ ಒಂದು ತರಗತಿಯಲ್ಲಿ ವರ್ತುಲಾಕಾರದಲ್ಲಿ ಹಾಕಲಾಗಿದ್ದ ಡೆಸ್ಕ್‌ಗಳಲ್ಲಿ ಐದಾರು ಜನ ಮಹಿಳೆಯರು ಕುಳಿತಿದ್ದರು. ಅಂಥ ಕಡೆ ನಾನು ಮೊದಲ ಬಾರಿ ಹೋಗಿದ್ದೆ. ಅವರು ಯಾವುದೋ ಚರ್ಚೆಯಲ್ಲಿ ಭಾಗಿಯಾಗಿದ್ದರು. ನಾನು ತುಸು ಅವರ ಚರ್ಚೆಯ ಕಡೆ; ತುಸು ಅವರ ವೇಷ ಭೂಷಣದ ಕಡೆ ಗಮನ ಕೊಟ್ಟೆ. ಸಮಾಜದಲ್ಲಿ ಮಹಿಳೆಯರ ಕೆಳಸ್ಥಾನಕ್ಕೆ ಕಾರಣಗಳು ಮತ್ತು ಅವುಗಳಿಗೆ ಪರಿಹಾರಗಳನ್ನು ಕುರಿತು ಅವರು ಮಾತನಾಡುತ್ತಿದ್ದರು. ಮೂವರದು ಬಾಬ್ ಕಟ್ ಕೂದಲು. ಇನ್ನಿಬ್ಬರಲ್ಲಿ ಒಬ್ಬರು ಮಾತ್ರ ಜಡೆ ಹಾಕಿದ್ದರು; ಮತ್ತೊಬ್ಬರು ಕೂದಲನ್ನು ಹಾಗೇ ಬಿಟ್ಟಿದ್ದರು. ಕಾಟನ್ ಸೀರೆ, ಚೂಡಿದಾರ್ ಹಾಕಿದ್ದರು. ನಾಲ್ವರ ಕೈಯಲ್ಲಿ ಬಳೆಗಳಿರಲಿಲ್ಲ. ಇಬ್ಬರ ಕೊರಳಲ್ಲಿ ಮಾತ್ರ ತಾಳಿ ಕಂಡಿತು; ಮೂವರ ಕಾಲ್ಬೆರಳಲ್ಲಿ ಕಾಲುಂಗುರ ಕಾಣಿಸಲಿಲ್ಲ. ಮಹಿಳಾ ವಿಮೋಚನೆ, ಮಹಿಳಾ ವಿಮೋಚನಾ ದಶಕ, ಅಂತಾರಾಷ್ಟ್ರೀಯ ಮಹಿಳಾ ಸಂಘಟನೆ, ಅತ್ಯಾಚಾರ, ತಲಾಖ್, ವರದಕ್ಷಿಣೆ ಕಾಯ್ದೆ, ಸಂವಿಧಾನದ ಅನುಚ್ಛೇದಗಳೆಲ್ಲವೂ ಅವರ ಮಾತುಗಳಲ್ಲಿ ಮತ್ತೆ ಮತ್ತೆ ಹಾದು ಹೋಗುತ್ತಿದ್ದವು.

ತುಸು ಹೊತ್ತಾದ ಬಳಿಕ ಅವರು ಚರ್ಚೆಯನ್ನು ನಿಲ್ಲಿಸಿ, ನಮ್ಮ ಕಡೆ ಗಮನ ಕೊಟ್ಟರು. ಬನಸೋಡೆ ಮತ್ತು ಹೀರಾ ಅವರಿಗೆ ಮೊದಲೇ ಪರಿಚಯವಿದ್ದ ಕಾರಣ, ನನ್ನನ್ನು ನಾನೇ ಪರಿಚಯಿಸಿಕೊಳ್ಳಲು ಹೇಳಿದರು. ತುಸು ಸಂಕೋಚವಾಯಿತು. ಆ ಮುಂಚೆ ಇಂಥ ಸಭೆಗಳಲ್ಲಿ ಎಂದೂ ಭಾಗವಹಿಸಿರಲಿಲ್ಲ; ನನ್ನನ್ನು ನಾನೇ ಎಂದೂ ಪರಿಚಯಿಸಿಕೊಂಡಿರಲಿಲ್ಲ. ಆ ದಿನ ಹೆಚ್ಚು ಹೊತ್ತು ಇರಲು ನನಗೆ ಸಾಧ್ಯವಾಗಲಿಲ್ಲ. ಮನೆಗೆ ಬೇಗ ಮರಳಬೇಕಿತ್ತು. ಹಾಗಾಗಿ, ಎಲ್ಲರಿಗೆ ಹೇಳಿ ಅಲ್ಲಿಂದ ಬೇಗ ಬಂದೆ.

ಅನಂತರ 'ಮೈತ್ರಿಣ' ಗುಂಪಿನತ್ತ ಆಕರ್ಷಿತಳಾದೆ. ಪ್ರತಿ ಶನಿವಾರ ಮೂರು ಗಂಟೆಗೆ ಹೋಗುವುದೆಂದು ನಿರ್ಧರಿಸಿದೆ. ಅಲ್ಲಿ ನನಗೆ ಹಲವಾರು ಹೊಸ ವಿಷಯಗಳು ತಿಳಿದವು. ಮೊದಲೇ ತಿಳಿದಿದ್ದ ಕೆಲವಾರು ವಿಷಯಗಳಿಗೆ ಅಲ್ಲಿ ಹೊಸ ಅರ್ಥ ತಿಳಿಯಿತು. ನಾನೇ ಮಹಿಳೆಯಾಗಿದ್ದರೂ ಅನೇಕ ಶಾರೀರಿಕ, ಲೈಂಗಿಕ ಹಾಗೂ ಸಾಮಾಜಿಕ ವಿಷಯಗಳತ್ತ ಗಮನ ಹರಿಸಿರಲೇ ಇಲ್ಲ. ಸ್ತ್ರೀ-ಪುರುಷರ ವ್ಯವಸ್ಥಿತ ದೇಹ ರಚನೆ, ಅದರ ವೈಶಿಷ್ಟ್ಯದ ಬಗ್ಗೆ ನಿಃಸಂಕೋಚವಾಗಿ ಮಾತಾಡಲು ನನಗೆ ಸಾಧ್ಯವಾದದ್ದೇ 'ಮೈತ್ರಿಣ' ಗುಂಪಿನಿಂದ. ಆ ಮೊದಲು ಕೆಲವಾರು ಲೈಂಗಿಕ ಮಾಹಿತಿಯುಳ್ಳ ಹಳದಿ ಸಾಹಿತ್ಯ ಕಣ್ಣಿಗೆ ಬಿದ್ದಿತ್ತಾದರೂ, ಅದನ್ನು ದೂರ ಇಟ್ಟಿದ್ದೆ. ಇಲ್ಲಿ ಕೈಗೆ ಸಿಕ್ಕ ಸಾಹಿತ್ಯವು ಲೈಂಗಿಕತೆಯನ್ನು ಶಾಸ್ತ್ರೀಯವಾಗಿ, ಯಾವುದೇ ರೀತಿಯಲ್ಲಿ ಭಾವನೆಗಳನ್ನು ಪ್ರಚೋದಿಸದ ರೀತಿಯಲ್ಲಿ, ವಿವರಿಸಿತ್ತು.

ಮಹಿಳೆಯರ ಸ್ಥಾನಮಾನದ ವಾಸ್ತವ ಇಲ್ಲಿನ ಚರ್ಚೆಯಲ್ಲಿ ನನಗೆ ಮನದಟ್ಟಾಯಿತು. ಅಂಕಿ-ಅಂಶಗಳನ್ನು, ಸತ್ಯ ಪ್ರಸಂಗಗಳನ್ನು ಅಧ್ಯಯನ ಮಾಡಿದೆ; ಕೆಲವು ಶನಿವಾರ 'ಮೈತ್ರಿಣ'ದಲ್ಲಿ ದೌರ್ಜನ್ಯಕ್ಕೆ ಈಡಾದ ಮಹಿಳೆಯರು ವಿವರಿಸಿದ ಸಂದರ್ಭಗಳನ್ನು ಕೇಳಿಸಿಕೊಂಡೆ. ನನಗೆ ಹೊಸ ಲೋಕದ ದರ್ಶನವಾಯಿತು. ಇಷ್ಟು ವರ್ಷಗಳಲ್ಲಿ ಈ ವಿಷಯಗಳನ್ನು ಅರಿತುಕೊಳ್ಳಲಿವಲ್ಲ ಎಂದು ವ್ಯಥೆಯಾಯಿತು; ನಾಚಿಕೆಯೂ ಆಯಿತು. ಆದರೆ ಈಗಲಾದರೂ ನಾನು ಸರಿಯಾದ ಜಾಗಕ್ಕೆ ಬಂದು, ವಿಷಯ ಜ್ಞಾನವನ್ನು ಪಡೆದೆನಲ್ಲ ಎಂದು ಸಂತೋಷವಾಯಿತು. ಮಹಾರಾಷ್ಟ್ರದ ಶ್ರೇಷ್ಠ ಮಹಿಳಾ ಚಿಂತಕರು ಮತ್ತು ಹೋರಾಟಗಾರರು (ಛಾಯಾ ದಾತಾರ್, ವಿದ್ಯಾ ಬಾಳ್, ಉಷಾ ಮೆಹ್ತಾ, ಮುಂತಾದವರು) ನನಗೆ ಈ ಗುಂಪಿನ ಮೂಲಕವೇ ಪರಿಚಯವಾದರು.

* * *

*(ಮುಂದುವರಿಯುವುದು)*

## ಸಮತಾ ವೇದಿಕೆ - ಪ್ರಗತಿಪರ ಮಹಿಳಾ ವೇದಿಕೆ

### ಮನವಿ

ಇತ್ತೀಚೆಗೆ ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿನಿ ಲೈಂಗಿಕ ದೌರ್ಜನ್ಯಕ್ಕೊಳಗಾದ ಶ್ರೀಮತಿ ಸರಿತಾರವರಿಗೆ "ನೀವು ಮಾಧ್ಯಮಗಳಿಗೆ ವಿಶ್ವವಿದ್ಯಾನಿಲಯದ (ವಿ.ವಿ.) ಗೌರವಕ್ಕೆ ಧಕ್ಕೆ ತರುವಂತಹ ಹೇಳಿಕೆ ನೀಡಿ, ವಿ.ವಿ. ಶೈಕ್ಷಣಿಕ ವಾತಾವರಣವನ್ನು ಕಲುಷಿತಗೊಳಿಸಿದ್ದೀರಿ, ಇದು ಒಂದು ದುರ್ನಡತೆಯಾಗಿರುತ್ತದೆ" ಎಂಬ ಎಚ್ಚರಿಕೆ ಪತ್ರವನ್ನು ವಿಶ್ವವಿದ್ಯಾಲಯವು ನೀಡಿದೆ. ಪ್ರಪಂಚದಲ್ಲೇ ವಿಖ್ಯಾತಿಪಡೆದ ಪಂಚತಾರಾ ಮೈಸೂರು ವಿಶ್ವವಿದ್ಯಾನಿಲಯಕ್ಕೆ ತನ್ನ ಆವರಣದಲ್ಲಿರುವ ಮಹಿಳೆಯರನ್ನು ಲೈಂಗಿಕ ದೌರ್ಜನ್ಯದ ಅಂಜಿಕೆಯಲ್ಲಿ ಇಟ್ಟಿರುವ ಪರಿಸ್ಥಿತಿ ಅವಮಾನಕರವೋ ಅಥವಾ "ತನ್ನ ಮೇಲೆ ದೌರ್ಜನ್ಯ ನಡೆಯುತ್ತಿದೆ, ವಿ.ವಿ. ತನಗೆ ನ್ಯಾಯ ದೊರಕಿಸಿಕೊಡಬೇಕು" ಎಂದು ಮಾಧ್ಯಮಗಳಿಗೆ ಮೊರೆಹೊಕ್ಕ ಮಹಿಳೆಯ ಹೇಳಿಕೆ ಅವಮಾನಕರವೋ ಎಂದು ಸ್ಪಷ್ಟೀಕರಿಸಬೇಕಾಗಿದೆ. ಈ ನಿರ್ಧಾರ ವಿಶಾಖ ವಿರುದ್ಧ ರಾಜಸ್ಥಾನ ರಾಜ್ಯ ಪ್ರಕರಣದಲ್ಲಿ ಭಾರತದ ಸರ್ವೋಚ್ಚ ನ್ಯಾಯಾಲಯವು ನೀಡಿರುವ ಐತಿಹಾಸಿಕ ತೀರ್ಪಿನಲ್ಲಿರುವ – ``In particular it (employer) should ensure that victims or witnesses are not victimized or discriminated against while dealing with complaints of sexual harassment'' ಎನ್ನುವ ನಿಲುವಿಗೆ ವಿರುದ್ಧವಾಗಿದೆ. ಎಚ್ಚರಿಕೆ ಪತ್ರ ನೀಡುವ ಮೂಲಕ ಮೈಸೂರು ವಿ.ವಿ. ತನ್ನನ್ನು ತಾನೇ ಅವಮಾನಿಸಿಕೊಂಡಿದೆ ಹಾಗೂ ಸರ್ವೋಚ್ಚ ನ್ಯಾಯಾಲಯದ ತೀರ್ಪನ್ನು ಸಹ ಅವಮಾನಿಸಿದೆ.

ಸರ್ವೋಚ್ಚ ನ್ಯಾಯಾಲಯದ ಆದೇಶದ ಮೇರೆಗೆ ರಚಿಸಲಾದ "ಮಹಿಳಾ ದೌರ್ಜನ್ಯ ದೂರು ಸಮಿತಿ"ಯು ಮೈಸೂರು ವಿಶ್ವವಿದ್ಯಾನಿಲಯದಲ್ಲಿದ್ದಾಗ್ಯು ಪ್ರಾರಂಭದಲ್ಲಿ ಈ ಪ್ರಕರಣವನ್ನು ಸಮಿತಿಗೆ ಒಪ್ಪಿಸದೇ, ಸ್ವತಃ ಮೇಲಾಧಿಕಾರಿಗಳೇ ಪ್ರಕರಣವನ್ನು ಕೈಗೆತ್ತಿಕೊಂಡು ವಿಳಂಬನೀತಿ ಅನುಸರಿಸಿದ್ದು ಸಂಶಯಕ್ಕೆ ಆಸ್ಪದ ಮಾಡಿಕೊಟ್ಟಿತ್ತು. ನಂತರದ ವಿದ್ಯಮಾನಗಳು ಅಂದರೆ, ಸಮಿತಿಯು ವರದಿ ಸಲ್ಲಿಸಿದ ನಂತರ ಹೆಚ್ಚು ಕಮ್ಮಿ ಒಂದು ತಿಂಗಳಿನವರೆಗೆ ವರದಿಯನ್ನು ಮಂಡಿಸದೇ, "ರಾಜ್ಯ ಮಾನವ ಹಕ್ಕು ಆಯೋಗ"ದ ಆದೇಶ ಬಂದ ನಂತರವೇ ವರದಿಯನ್ನು ಸಿಂಡಿಕೇಟ್‌ನಲ್ಲಿ ಮಂಡಿಸಲಾಯಿತು ಮತ್ತು ತಪ್ಪಿತಸ್ಥರ ವಿರುದ್ಧ ಕ್ರಮ ಕೈಗೊಳ್ಳುವುದನ್ನು ಬಿಟ್ಟು, ದೌರ್ಜನ್ಯಕ್ಕೊಳಗಾದ ಅಸಹಾಯಕ ಮಹಿಳೆಗೆ ಒಂದು ಎಚ್ಚರಿಕೆ ಪತ್ರ ನೀಡಿರುವುದು ವಿ.ವಿ.ಯ ಮಹಿಳಾ ವಿರೋಧಿ ಹಾಗೂ ವಿಳಂಬ ನೀತಿಗೆ ಹಿಡಿದ ಕೈಗನ್ನಡಿಯಾಗಿದೆ. ವಿ.ವಿ.ಯ ಈ ಮಹಿಳಾ ವಿರೋಧಿ ನಿಲುವು ಲೈಂಗಿಕ ದೌರ್ಜನ್ಯದ ಇನ್ನೂ ಕೆಲವು ಪ್ರಕರಣಗಳಲ್ಲೂ ಕಂಡುಬರುತ್ತದೆ.

ಮೈಸೂರು ವಿ.ವಿ. "ಮಹಿಳಾ ದೌರ್ಜನ್ಯ ದೂರು ಸಮಿತಿ"ಯು ಕಳೆದ 5 ವರ್ಷಗಳಲ್ಲಿ 25 ಪ್ರಕರಣಗಳಲ್ಲಿ ವಿಚಾರಣೆ ನಡೆಸಿದೆ. ಸರಿತಾರವರ ಪ್ರಕರಣ 26ನೆಯದಾಗಿದೆ. ಇದರಲ್ಲಿ 18 ಪ್ರಕರಣಗಳಲ್ಲಿ ಲೈಂಗಿಕ ದೌರ್ಜನ್ಯ ನಡೆದಿದೆಯೆಂದು ಸಾಬೀತಾಗಿದೆ. ಉಳಿದ ಪ್ರಕರಣಗಳನ್ನು ತಾಂತ್ರಿಕ ಕಾರಣದಿಂದ ಕೈಬಿಡಲಾಗಿದೆ. ಸಾಬೀತಾದ ಪ್ರಕರಣಗಳಲ್ಲಿ ಕ್ಷಮಾಪಣೆ ಕೇಳಿದ ಪ್ರಕರಣಗಳನ್ನು ಬಿಟ್ಟು ಉಳಿದ ಪ್ರಕರಣಗಳ ಆರೋಪಿಗಳ ಮೇಲೆ ವಿ.ವಿ.ಯು ಯಾವುದೇ ರೀತಿಯ ಕ್ರಮವನ್ನು ಕೈಗೊಂಡಿಲ್ಲ. "ಮಹಿಳಾ ದೌರ್ಜನ್ಯದ ಪರಿಷ್ಕೃತ ಅಧಿನಿಯಮ"ದ ಅನುಮೋದನೆಯನ್ನು ರಾಜ್ಯಪಾಲರಿಂದ ಕಳೆದ ಒಂದೂವರೆ ವರ್ಷಗಳಿಂದ ಕಾಯುತ್ತಿದ್ದೇವೆಂದು ನೆಪ ಹೇಳುತ್ತಾ, ಶಿಕ್ಷೆ ವಿಧಿಸುವ ಗುರುತರ ಜವಾಬ್ದಾರಿಯಿಂದ ವಿ.ವಿ.ಯು ನುಣುಚಿಕೊಳ್ಳುತ್ತಿದೆ. ಮಾಧ್ಯಮಗಳಲ್ಲಿ ಅತ್ಯಂತ ಸವಿಸ್ತಾರವಾಗಿ ವರದಿಯಾದ ಮತ್ತೊಂದು ಪ್ರಕರಣ : ಮಾರ್‍ಯಾಮ್ vs ಅಶೋಕ್. ಈ ಪ್ರಕರಣದಲ್ಲಿ ಒಂದಲ್ಲ, ಎರಡು ಸಮಿತಿಗಳು ಪ್ರೊ. ಅಶೋಕ್‌ರ ಮೇಲಿನ ಆರೋಪ ಸಾಬೀತಾಗಿದೆಯೆಂದು ತೀರ್ಪು ನೀಡಿದ್ದು, ಹೆಚ್ಚುಕಡಿಮೆ ಒಂದೇ ರೀತಿಯ ಶಿಫಾರಸ್ಸುಗಳನ್ನು ಮಾಡಿದ್ದು ಸಹ ಕಂಡುಬಂದಿದೆ. ಆದರೆ ಮೈಸೂರು ವಿ.ವಿ. ಈ ಆರೋಪಿಗೆ ಲೈಂಗಿಕ ದೌರ್ಜನ್ಯಕ್ಕೆ ಅನುಗುಣವಾದ ಯಾವುದೇ ಶಿಕ್ಷೆಯನ್ನು ವಿಧಿಸದೆ, ಪರೀಕ್ಷೆಯಲ್ಲಿ ಮಾಲ್ ಪ್ರಾಕ್ಟಿಸ್ ಮಾಡಿರುವ ಆರೋಪಿಗಳಿಗೆ ನೀಡುವ ಶಿಕ್ಷೆಯನ್ನು ನೀಡಿ ಕೈ ತೊಳೆದುಕೊಂಡಿದೆ. ಇವೆಲ್ಲವನ್ನು ಗಮನಿಸಿದಾಗ ಸರಿತಾರವರ ಪ್ರಕರಣದಲ್ಲಿಯೂ ಆರೋಪಿಗೆ ಯಾವ ಶಿಕ್ಷೆಯೂ ವಿಧಿಸದೇ ಮೈಸೂರು ವಿ.ವಿ. ಪ್ರಕರಣವನ್ನು ಮುಚ್ಚಿಹಾಕಲು ಪ್ರಯತ್ನಿಸುತ್ತಿದೆ ಎಂಬ ಬಲವಾದ ಸಂಶಯಕ್ಕೆ ಎಡೆಮಾಡಿದೆ.

ಮೈಸೂರು ವಿ.ವಿ. "ಮಹಿಳಾ ದೌರ್ಜನ್ಯ ದೂರು ಸಮಿತಿ"ಯನ್ನು ರಚಿಸಿದ ಪ್ರಾರಂಭದ ಹಂತದಲ್ಲಿ ಅನೇಕ ದೂರುಗಳು ಸಮಿತಿಯ ಮುಂದೆ ಬಂದವು. ಆದರೆ ಸಮಿತಿಯು ನೀಡಿದ ವರದಿಯ ಆಧಾರದ ಮೇಲೆ ಯಾವುದೇ ಸಮರ್ಪಕವಾದ ಶಿಕ್ಷೆಯನ್ನು ವಿಧಿಸದೆ, ವಿ.ವಿ.ಯ ಮಹಿಳಾಪರ ಧೋರಣೆಗಳು ವ್ಯಕ್ತವಾಗದ ಹಿನ್ನೆಲೆಯಲ್ಲಿ, ಸಮಿತಿಗೆ ಬರುತ್ತಿರುವ ದೂರುಗಳ ಸಂಖ್ಯೆ ಕಡಿಮೆಯಾಗಿದೆಯೆಂದು ನಮ್ಮ ಸಂದೇಹ. ದುರಾದೃಷ್ಟವಶಾತ್ ಇದು ವಿ.ವಿ.ಯ ಆವರಣದ ಅಸ್ವಾಸ್ಥ್ಯವನ್ನಲ್ಲದೆ ಅಲ್ಲಿರುವ ಹತಾಶೆಯನ್ನು ತೋರಿಸುತ್ತದೆ ಎಂದು ಸಂಸ್ಥೆ ಹಾಗೂ ಸಮಾಜ ಅರ್ಥ ಮಾಡಿಕೊಳ್ಳಬೇಕು. ಮೈಸೂರು ವಿ.ವಿ. ಹತ್ತಾರು ಪ್ರಕರಣದಲ್ಲಿ ಒಬ್ಬ ಮಹಿಳೆಗೂ ನ್ಯಾಯ ದೊರಕಿಸಿಲ್ಲ. ಇದಕ್ಕೆ ವಿರುದ್ಧವಾಗಿ ಮಂಗಳೂರು ವಿಶ್ವವಿದ್ಯಾನಿಲಯವು ದಾಖಲಿಸಿದ ಒಂದು ಪ್ರಕರಣಗಳಲ್ಲಿ ಆರೋಪಿಗೆ ಶಿಕ್ಷೆ ನೀಡಿ ಲೈಂಗಿಕ ಕಿರುಕುಳವನ್ನು ವಿಶ್ವವಿದ್ಯಾನಿಲಯ ಸಹಿಸುವುದಿಲ್ಲ ಎಂಬ ಬಲವಾದ ಸಂದೇಶವನ್ನು ಪರಿಣಾಮಕಾರಿಯಾಗಿ ಸಮಾಜಕ್ಕೆ ಮುಟ್ಟಿಸಿದೆ.

**ಈ ಸಂದರ್ಭದಲ್ಲಿ ಮೈಸೂರು ವಿ.ವಿ. ಈ ಕೆಳಕಂಡ ಪ್ರಶ್ನೆಗಳಿಗೆ ಉತ್ತರಿಸಬೇಕಾಗಿದೆ:**

1. **ಪರಿಷ್ಕೃತ ಅಧಿನಿಯಮವನ್ನು ಜಾರಿಗೆ ತರಲು ಇಷ್ಟೊಂದು (ಒಂದೂವರೆ ವರ್ಷಕ್ಕಿಂತ ಹೆಚ್ಚು!) ವಿಳಂಬವೇಕೆ?**
2. **ಸರಿತಾರಿಗೆ ವಿ.ವಿ. ನೀಡಿದ ಎಚ್ಚರಿಕೆ ಪತ್ರದಲ್ಲಿ "ನಿಮಗೆ ವಿ.ವಿ.ಯ ವತಿಯಿಂದ ಕೈಗೊಳ್ಳಬಹುದಾದ ಪರಿಹಾರ ಕಾರ್ಯಗಳನ್ನೆಲ್ಲಾ ಕೈಗೊಂಡಿದ್ದರೂ ಸಹ ನೀವು ವಿ.ವಿ.ಯ ಬಗ್ಗೆ ಬಹಳ ಹಗುರವಾಗಿ ಮಾತನಾಡುತ್ತಿದ್ದು ವಿ.ವಿ.ಯ ಗೌರವಕ್ಕೆ ಧಕ್ಕೆ ಬರುವಂತೆ..." ಎಂಬ ಹೇಳಿಕೆ ಇದೆ. ಪರಿಹಾರವು ವಿ.ವಿ ಕರ್ತವ್ಯವೋ ಅಥವಾ ಸರಿತಾರವರಿಗೆ ವಿ.ವಿ. ತೋರುತ್ತಿರುವ ಅನುಗ್ರಹವೋ?**
3. **ಇತ್ತೀಚೆಗೆ ಆಡಳಿತಾತ್ಮಕ ಕಾರಣ ಕೊಟ್ಟು ವಿ.ವಿ. ಸರಿತಾ ಅವರ ಮೇಲೆ ಮತ್ತೊಂದು ವಿಚಾರಣೆಯನ್ನು ನಡೆಸಲು ಆದೇಶ ನೀಡಿದೆ. ಈ ವಿಚಾರಣೆ ಅತ್ಯವಶ್ಯಕವೇ ಆಗಿದ್ದ ಸಂದರ್ಭದಲ್ಲಿ ಅದನ್ನು ಪ್ರಾರಂಭಿಸಲು ಇಷ್ಟು ತಡಮಾಡಿದ್ದೇಕೆ? ಇದು ವಿ.ವಿ.ಯ ವಿಳಂಬ ನೀತಿಗೆ ಮತ್ತೊಂದು ಉದಾಹರಣೆಯಲ್ಲವೇ?**
4. ಒಂದೇ ಒಂದು ಪ್ರಕರಣದಲ್ಲಿ ಮಂಗಳೂರು ವಿಶ್ವವಿದ್ಯಾನಿಲಯ ಇಂಥ ದಿಟ್ಟ ನಿಲುವು ತೆಗೆದುಕೊಳ್ಳಬಹುದಾದರೆ ಮೈಸೂರು ವಿ.ವಿ. ಇಷ್ಟೊಂದು ಪ್ರಕರಣಗಳಲ್ಲಿ ನೊಂದ ಮಹಿಳೆಯರಿಗೆ ನ್ಯಾಯ ದೊರಕಿಸಿಕೊಡಲಾಗುತ್ತಿಲ್ಲವೇಕೆ?

**ನಮ್ಮ ಬೇಡಿಕೆಗಳು**

1. **ಈಗಾಗಲೇ ಲೈಂಗಿಕ ದೌರ್ಜನ್ಯಕ್ಕೆ ಒಳಗಾಗಿ ನೊಂದ ಸರಿತಾರವರ ಮೇಲಿನ ಎರಡನೇ ವಿಚಾರಣೆಯನ್ನು ವಿ.ವಿ. ಈ ಕೂಡಲೇ ಕೈಬಿಡಬೇಕು.**
2. **ಆರೋಪಿಗಳಿಗೆ ತಕ್ಕ ಶಿಕ್ಷೆ ನೀಡುವುದರ ಮೂಲಕ ವಿ.ವಿ. ನ್ಯಾಯಪರವಾದ ನಿಲುವನ್ನು ಸ್ಪಷ್ಟಪಡಿಸಬೇಕು.**
3. **ಮಹಿಳೆಯರಿಗೆ ಭದ್ರತೆಯನ್ನು ಒದಗಿಸಿ, ವಿ.ವಿ.ಯ ಆರೋಗ್ಯಕರ ಶೈಕ್ಷಣಿಕ ವಾತಾವರಣವನ್ನು ಕಾಪಾಡಬೇಕು.**

ಸತ್ತಾಗ ಸಂತಾಪ ಸೂಚಿಸುವ ಸಮಾಜ ಬದುಕಿ ಉಳಿದು ಹೋರಾಡುವಾಗ ವಿರೋಧಿಸುವುದು ಒಂದು ವಿಪರ್ಯಾಸವಲ್ಲವೇ? ಆರೋಪ ಸಾಬೀತಾದ ಮೇಲೂ ಆರೋಪಿಯ ಪರವಾಗಿ ವಾದಿಸುತ್ತಿರುವ ಪಟ್ಟಭದ್ರ ಹಿತಾಸಕ್ತಿಗಳು "ಮಹಿಳೆ ದಲಿತರಲ್ಲಿ ದಲಿತಳು" ಎನ್ನುವ ಬಾಬಾಸಾಹೇಬ್ ಅಂಬೇಡ್ಕರ್‌ರವರ ನುಡಿಯನ್ನು ಮರೆತಂತಿದೆ. ಲೈಂಗಿಕ ದೌರ್ಜನ್ಯ ಒಂದು ಸಾಮಾಜಿಕ ಪಿಡುಗಾಗಿದ್ದು ಇದರ ವಿರುದ್ಧ ಎಲ್ಲರೂ ಜಾತ್ಯತೀತವಾಗಿ ಹೋರಾಡಬೇಕಾದ್ದು ಸಾಮಾಜಿಕ ಜವಾಬ್ದಾರಿ.

ಸಂಚಾಲಕರು
(ಸಮತಾ ವೇದಿಕೆ)

**(ಮೈಸೂರಿನ ಸಮತಾವೇದಿಕೆಯವತಿಯಿಂದ ತಾ. 27-7-2011ರಂದು ಈ ರಾಜ್ಯದ ಕುಲಾಧಿಪತಿ ಹಾಗೂ ರಾಜ್ಯಪಾಲರೂ ಆದ ಶ್ರೀ ಹನ್ಸ್‌ರಾಜ್ ಭಾರದ್ವಾಜ್ ಅವರಿಗೆ ಸಲ್ಲಿಸಿದ ಮನವಿ.)**

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2010-12

*ಪ್ರೀತಿಯ ರಾಜೇಶ್ವರಿ ಎಚ್.ಎಸ್. ಅವರಿಗೆ*

'ನಮ್ಮ ಮಾನಸ' ಪತ್ರಿಕೆ ಸರಿಯಾಗಿ ತಲುಪುತ್ತಿದೆ. ಲೇಖನಗಳು ಆಪ್ತವಾಗಿರುತ್ತವೆ. ಈ ಸಲದ ಸಂಪಾದಕೀಯ ಮಾತುಗಳಿಂದ (ಜೂಲೈ-2011) ಹೃದಯ ಆರ್ದ್ರವಾಯಿತು. ನಾಗರಿಕ ಸಮಾಜದಲ್ಲಿ ಇದೆಲ್ಲ ಏನು ನಡೆಯುತ್ತಿದೆ ಎಂದು ತುಂಬ ಬೇಸರವಾಗುತ್ತದೆ. ಸೇತುಮಾಧವ ಎಂ.ವಿ. ಅವರ 'ನನ್ನ ಮಗಳಿಲ್ಲದೆ...' ಲೇಖನ ಓದಿದೆ. ನಿಜವಾಗಿಯೂ ಬೆಟ್ಟಿಗೆ ಧನ್ಯವಾದಗಳು, ಶುಭಹಾರೈಕೆಗಳು.

ಯುರೋಪ-ಅಮೆರಿಕದ ಮಹಿಳೆಯರನ್ನು ಮದುವೆ ಮಾಡಿಕೊಂಡು ಬಂದ ಅರಬರು ತಮ್ಮ ನಾಡಿಗೆ ಬಂದ ತಕ್ಷಣ ಅವರು ಮೊದಲು ಮಾಡುವ ಕೆಲಸವೇ ಅವರ ಪಾಸ್‌ಪೋರ್ಟ್ ಇಸಿದುಕೊಂಡು ಬಿಡುವುದು ಮತ್ತೆ ಅವರು ಎಂದೂ ಮರಳಿಹೋಗದಂತೆ ಸ್ವಾತಂತ್ರ್ಯ ಹರಣಮಾಡಿ ಕ್ರೌರ್ಯತೆಗೆ ತಳ್ಳಿಬಿಡುವುದು. ಮುಂದುವರೆದ ದೇಶಗಳಲ್ಲಿ ಹಕ್ಕಿಗಳಂತೆ ಹಾರಾಡಿ ಬೆಳೆದ ಹುಡುಗಿಯರ ಬದುಕು ನಿಜಕ್ಕೂ ಇಲ್ಲಿ ನರಕಸದೃಶವಾಗಿ ಬಿಡುತ್ತದೆ. ಇವರ ಧ್ವನಿ ಯಾರಿಗೂ ಕೇಳಿಸುವುದೇ ಇಲ್ಲ. ಇಂಥ ಕೆಲವು ಘಟನೆಗಳನ್ನು ನಾನು ಅರಬ್ ನಾಡಿನಲ್ಲಿ ಇದ್ದಾಗ ನನ್ನ ಕಣ್ಣೆದುರೇ ನೋಡಿ ತಲ್ಲಣಿಸಿಹೋಗಿದ್ದೆ. (ಇಂಥ ಒಂದು ಘಟನೆಯ ನನ್ನ ಲೇಖನ ಹೋದವರ್ಷದ ಮಾನಸದಲ್ಲಿ ಪ್ರಕಟಿಸಿದ ನೆನಪು.)

ಇಲ್ಲಿ 'ಬೆಟ್ಟಿ' ಕೊನೆಗೆ ಟರ್ಕಿಯ ಮೂಲಕ ಪ್ರಯಾಣದ ಕಠಿಣತೆ ಎದುರಿಸಿ ತನ್ನ ತಾಯ್ನಾಡು ತಲುಪಿದ್ದು ಓದುವಾಗ ಅವಳ (ಹೆಣ್ಣಿನ) ಸ್ವಾತಂತ್ರ್ಯದ ಹಂಬಲದ ತೀವ್ರತೆ ಅರ್ಥವಾಗುತ್ತದೆ.

ಹಾಗೆಯೇ 'ಬಿದಿರಿನ ಬುಟ್ಟಿ' ಮಂಗಳೂರು ವಿಜಯ ಅವರು ಅನುವಾದಿಸುತ್ತಿರುವ ಊರ್ಮಿಳಾ ಪವಾರ ಅವರ ಆತ್ಮಚರಿತ್ರೆ ಕೂಡಾ (ಜಾತಿಧರ್ಮದ ಕ್ರೌರ್ಯದಿಂದ) ಚಿಂತನೆಗೆ ಒಳಪಡಿಸುತ್ತದೆ.

ನಿಮ್ಮೆಲ್ಲರ ಶ್ರಮದಿಂದ ಪತ್ರಿಕೆ ಮೌಲ್ಯವನ್ನು ಉಳಿಸಿ ಕೊಂಡು ಬೆಳೆಯುತ್ತಿದೆ ಎನ್ನುವುದು ಸಂತೋಷ.

ಇಂತಿ ತಮ್ಮ ವಿಶ್ವಾಸಿ
**ಲತಾಗುತ್ತಿ**

## ಮಾನಸ ವೇದಿಕೆಯ ಆಹ್ವಾನ

ಚರ್ಚೆ, ವಿಚಾರ ವಿನಿಮಯ, ಆತ್ಮೀಯರ ಭೇಟಿ ಮಾನಸ ಪತ್ರಿಕೆಯ ಬಗ್ಗೆ ಸಲಹೆ ಸೂಚನೆ, ಹೊಸ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಯೋಜನೆ, ಕೊಂಚ ಹರಟೆ, ಕೊಂಚ ಕ್ಯಾಂಟೀನ್‌ಕಾಫಿಗಾಗಿ ಪ್ರತಿ ತಿಂಗಳೂ ಎರಡನೇ ಬುಧವಾರ ಸಂಜೆ 5.30 ಗಂಟೆಗೆ ಆಸಕ್ತರೆಲ್ಲರೂ ಸೇರೋಣ. ರವೀಂದ್ರ ಕಲಾಕ್ಷೇತ್ರದ ಸಂಸ ಬಯಲು ರಂಗಮಂದಿರದ ಮೆಟ್ಟಿಲುಗಳಿಗೂ ಮಾನಸ ವೇದಿಕೆಗೂ ಒಂದು ಅವಿನಾಭಾವ ಸಂಬಂಧವಿದೆ. ಮಹಿಳಾ ಧ್ವನಿಗಾಗಿ ಸಾರ್ವಜನಿಕ ಸ್ಥಳವನ್ನು ಉಪಯೋಗಿಸುವುದರ ಹಿಂದೆ ಸ್ತ್ರೀವಾದದ ಪರಿಕಲ್ಪನೆಯೂ ಇದೆ. ಈ ಸಂಬಂಧವನ್ನು ಮತ್ತಷ್ಟು ಗಟ್ಟಿಗೊಳಿಸಲು **ಸೆಪ್ಟೆಂಬರ್ 14 ಬುಧವಾರ ಸಂಜೆ** ನೀವೂ ಬನ್ನಿ. ನಿಮ್ಮ ಗೆಳತಿಯರನ್ನೂ ಕರೆತನ್ನಿ.

*-ಮಾನಸ ವೇದಿಕೆ*

Registered Magazine

*Posted on 9th of every month at MBC, Bangalore GPO*
*Total No. of Pages: 24*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ
ಬೆಂಗಳೂರು - 560 018